ಪ್ರಾಥಮಿಕ ಶಾಲೆಗಳ

ಹೊಸ ಅಭ್ಯಾಸ ಕ್ರಮಕ್ಕನುಸರಿಸಿ ಬರೆದ

೪ನೆಯ ಇಯತ್ತೆಗಾಗಿ

ನೂತನ

# ಸಾಮಾನ್ಯಜ್ಞಾನ



ಪ್ರಕಾಶಕರು :

ದಿ ಅಶೋಕ ಪಬ್ಲಿಶಿಂಗ ಕಂ.,

ಧಾರವಾಡ.



೧೯೫೯ ಇಸ್ವಿ ] [ ಬೆಲೆ : ೧೨ ಆಣೆ

# ಪ್ರಕಾಶಕರ ಮಾತು



ನವೀನ ಅಭ್ಯಾಸಕ್ರಮಕ್ಕೆ ಅನುಗುಣವಾಗಿ ಪ್ರಾಥಮಿಕ ಶಾಲೆಯ ನಾಲ್ಕನೆಯ ವರ್ಗದ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಈ ಪುಸ್ತಕವು ರಚಿತವಾಗಿದೆ. ಅಭ್ಯಾಸಪತ್ರಿಕೆಯಲ್ಲಿ ಸಾಮಾನ್ಯಜ್ಞಾನದ ಸದರಿನಲ್ಲಿ ನಿರ್ಧರಿಸಲಾದ ಎಲ್ಲ ಬಾಲಕರ ಪರಿಚಿತ ಪ್ರಾಣಿವರ್ಗ ಸಸ್ಯವರ್ಗಗಳ ಪರಿಚಯ ಹಾಗೂ ಉದ್ಯೋಗ, ಕೆಲವು ರೋಗಗಳ ಉತ್ಪತ್ತಿ ಲಕ್ಷಣ ನಿವಾರಣೋಪಾಯ, ಟಪಾಲು ತಂತಿ ರೇಲ್ವೆಗೈಡು ಪಂಚಾಂಗಗಳ ಬಗ್ಗೆ ಮಾಹಿತಿ ಇತ್ಯಾದಿ— ವಿಷಯಗಳನ್ನು ವಿಪುಲವಾದ ಚಿತ್ರಗಳೊಡನೆ ಇಲ್ಲಿ ವಿವರಿಸಲಾಗಿದೆ. ಚಿತ್ರಗಳಿಂದಲೂ ಸರಲ ವಿವೇಚನೆಯಿಂದಲೂ ವಿಷಯವು ಬಾಲಕರಿಗೆ ಸುಲಭವಾಗಿ ಮನವರಿಕೆಯಾಗುವಂತೆ ಸಾಕಷ್ಟು ಪ್ರಯತ್ನಿಸಿರುವೆವು. ಆದರೂ ನಿರೀಕ್ಷಣೆ ಮತ್ತು ಪ್ರಯೋಗಗಳ ಮೂಲಕ ಕಲಿಸುವುದು ಒಳ್ಳೇ ಪ್ರಯೋಜನಕಾರಿಯೆಂಬುದನ್ನು ಶಿಕ್ಷಕರು ಅವಶ್ಯವಾಗಿ ಗಮನಿಸಬೇಕು.

ಈ ಪುಸ್ತಕದಲ್ಲಿ ಏನಾದರೂ ಕುಂದು ಕೊರತೆಗಳು ಕಂಡು ಬಂದಲ್ಲಿ ತಜ್ಞರು ಸಹೃದಯತೆಯಿಂದ ನಮಗೆ ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳುವೆವು. ಮತ್ತು ಈಗ ಕಣ್ತಪ್ಪಿ ಉಳಿದಿರಬಹುದಾದ ಅಚ್ಚಿನ ತಪ್ಪುಗಳನ್ನಾದರೂ ತಿದ್ದಿಕೊಳ್ಳಲಾಗುವದು.

—ಪ್ರಕಾಶಕರು.



ಮುದ್ರಕರು : ಶ್ರೀ. ಎಮ್. ಜಿ. ಪಾಲೇಕರ, ವಸಂತ ಮುದ್ರಣಾಲಯ, ಧಾರವಾಡ

ಪ್ರಕಾಶಕರು : ಶ್ರೀ. ಎಸ್. ಜಿ. ಪಾಟೀಲ, ದಿ ಅಶೋಕ ಪಬ್ಲಿಶಿಂಗ ಕಂ,
ಮಂಗಳವಾರ ಪೇಟೆ, ಧಾರವಾಡ.

# ಪರಿವಿಡಿ


| ವಿಷಯ | ಪುಟ ಸಂಖ್ಯೆ |
|---|---|
| ೧. ಮನೆಯಲ್ಲಿ ಸಾಕುವ ಪ್ರಾಣಿಗಳು .... | ೧ |
| ಆಕಳು .... .... .... | ೧ |
| ಎತ್ತು .... .... .... | ೬ |
| ಎಮ್ಮೆ .... .... .... | ೧೧ |
| ಕೋಣ .... .... .... | ೧೩ |
| ಕುದುರೆ .... .... .... | ೧೫ |
| ಕತ್ತೆ .... .... .... | ೧೯ |
| ಆಡು .... .... .... | ೨೧ |
| ಕುರಿ .... .... .... | ೨೩ |
| ನಾಯಿ .... .... .... | ೨೬ |
| ಬೆಕ್ಕು .... .... .... | ೩೦ |
| ಕೋಳಿ .... .... .... | ೩೫ |
| ೨. ಬೆಳೆಗಳು .... .... .... | ೩೭ |
| **ತೃಣಧಾನ್ಯಗಳು** | |
| ಜೋಳ .... .... .... | ೩೯ |
| ಬತ್ತ .... .... .... | ೪೧ |
| ಗೋದಿ .... .... .... | ೪೪ |
| ರಾಗಿ, ಸಾವಿ, ನವಣೆ, ಸಜ್ಜೆ .... .... | ೪೫ |
| **ದ್ವಿದಲ ಧಾನ್ಯಗಳು** | |
| ತೊಗರಿ .... .... .... | ೪೬ |
| ಕಡಲೆ .... .... .... | ೪೬ |
| ಮಡಕೆ, ಹೆಸರು, ಅಲಸಂದಿ, ಉದ್ದು, ಅವರೆ, ಹುರಳಿ | ೪೭ |
| **ಎಣ್ಣೆಯಕಾಳುಗಳು** | |
| ಸೇಂಗಾ .... .... .... | ೪೮ |
| ಕುಸುಬೆ .... .... .... | ೪೯ |

| ವಿಷಯ | ಪುಟಸಂಖ್ಯೆ |
|---|---|
| **ಇತರ ಬೆಳೆಗಳು** | |
| ಕಬ್ಬು .... .... .... | ೫೦ |
| ಹತ್ತಿ .... .... .... | ೫೨ |
| ತಂಬಾಕ .... .... .... | ೫೪ |
| ಸೆಣಬು .... .... .... | ೫೫ |
| ಚಹಾ .... .... .... | ೫೬ |
| ಕಾಫಿ .... .... .... | ೫೭ |
| ತೆಂಗು .... .... .... | ೫೮ |
| **೩. ರೋಗಗಳೂ ಅವುಗಳನ್ನು ಪ್ರತಿಬಂಧಿಸುವ ಉಪಾಯುಗಳು** | ೬೦ |
| ಮೈಲೀಬೇನೆ .... .... .... | ೬೧ |
| ಚಳಿಜ್ವರ .... .... .... | ೬೩ |
| ಮಾರಿಕಾ (ಕಾಲರಾ) .... .... | ೬೬ |
| ಪ್ಲೇಗು .... .... .... | ೭೦ |
| ಕ್ಷಯ .... .... .... | ೭೧ |
| ನಾರುಹುಣ್ಣು .... .... .... | ೭೬ |
| ಆರೋಗ್ಯದ ನಿಯಮಗಳು .... .... | ೭೯ |
| **೪. ಪೋಸ್ಟ ಆಫೀಸಿನ ಕಾರ್ಯಗಳು** | ೮೦—೮೫ |
| ಎಕ್ಸಪ್ರೆಸ್ ಡಿಲೇವ್ಹರಿ, ತಂತೀಟಪಾಲು, ಮನಿಆರ್ಡರ್ ತಾರಮನಿಆರ್ಡರು, ಪೋಸ್ಟಲ್ ಸೇವ್ಹಿಂಗ್ಸಬ್ಯಾಂಕ, ಬುಕ್‌ಪೋಸ್ಟ, ಪಾರ್ಸಲ್, ರಜಿಸ್ಟರ್ಡ, ವ್ಹಿ. ಪಿ. ಪಿ. ಉಗಿಬಂಡಿಯಿಂದ ವಸ್ತುಗಳನ್ನು ಕಳಿಸುವದು. .... .... .... | ೮೬ |
| **೫. ಹಳ್ಳಿಯ ಆಡಳಿತೆ**— ಗ್ರಾಮಪಂಚಾಯತಿ .... | ೮೭ |
| **ಪಟ್ಟಣಗಳ ಆಡಳಿತೆ**— ಮ್ಯುನಸಿಪಾಲಿಟಿ .... | ೮೯ |
| **೬. ಪಂಚಾಂಗ, ಪೋಸ್ಟಲ್ ಗಾಯಿಡ, ರೇಲ್ವೆ ವೇಳಾಪತ್ರಿಕೆಗಳನ್ನು ಉಪಯೋಗಿಸುವಿಕೆ** | ೯೧ |




# ನೂತನ
# ಸಾಮಾನ್ಯ ಜ್ಞಾನ

## ೧. ಮನೆಯಲ್ಲಿ ಸಾಕುವ ಪ್ರಾಣಿಗಳು

### ಆಕಳು

ಆಕಳನ್ನು ನೋಡದಿರುವವರು ಅಪರೂಪ. ಇದು ಸಭ್ಯವಾದ ಚುರುಕು ಪ್ರಾಣಿ. ಇದರ ಉಪಯೋಗವನ್ನರಿತ ನಮ್ಮ ಪೂರ್ವಜರು ಇದರ ಬಗ್ಗೆ ಪೂಜ್ಯ ಭಾವವನ್ನು ತಾಳುತ್ತಿದ್ದರು. ಅದೇ ಪರಂಪರೆಯು ನಮ್ಮಲ್ಲಿ ಇಂದಿಗೂ ರೂಢವಾಗಿದೆ.



ಆಕಳು

ಇದು ನಾಲ್ಕು ಕಾಲುಗಳುಳ್ಳ ಪಶುವರ್ಗಕ್ಕೆ ಸೇರಿದ ಪ್ರಾಣಿಯು. ಸಾಧಾರಣ ೩ ರಿಂದ ೫ ಫೂಟಿನ ವರೆಗೆ ಎತ್ತರವಿರುತ್ತದೆ. ಇದರಲ್ಲಿ ಕೆಂಪು, ಬಿಳಿದು, ಕರಿದು, ಹಂದುಂತ ಮೊದಲಾದ ಬಣ್ಣಗಳಿರುತ್ತವೆ. ಇದರ ಮುಖವು ತುಸು ಉದ್ದವಾಗಿದ್ದು ಅದರ ಮೇಲ್ಭಾಗದಲ್ಲಿ ಎರಡು ಚೂಪಾದ, ಬಿರುಸು ಕೋಡುಗಳಿರುತ್ತವೆ. ಕೆಲವು ಆಕಳುಗಳ ಕೋಡುಗಳು ಮೇಲಕ್ಕೆ

ಸರಳವಾಗಿಯೂ ಕೆಲವುಗಳಿಗೆ ಹಿಂದಕ್ಕೆ ಬಾಗಿಯೂ ಇರುವವು. ಅವುಗಳನ್ನು ಉಪಯೋಗಿಸಿ ಅದು ವೈರಿಗಳಿಂದ ತನ್ನನ್ನು ರಕ್ಷಿಸಿಕೊಳ್ಳುತ್ತದೆ. ಇದಕ್ಕೆ ತೀಕ್ಷ್ಣವಾದ ಎರಡು ಕಣ್ಣುಗಳಿರುತ್ತವೆ. ಅವುಗಳಿಗೆ ಹುಬ್ಬುಗಳಿರುವದಿಲ್ಲ. ಮೋರೆಯ ಎಡಬಲಗಳಲ್ಲಿ ಉದ್ದವಾದ ಎರಡು ಕಿವಿಗಳಿದ್ದು ಅವು ಬೇಕಾದತ್ತ ಹೊರಳಿಸಲು ಬರುವವು. ಅವುಗಳಿಂದ ಅದು ಮೋರೆಯ ಮೇಲಿನ ನೊಣಗಳನ್ನು ಹಾಡಿಸಿಕೊಳ್ಳುವದು. ಮೂಗಿನ ಹೊರಭಾಗವು ಮೆತ್ತಗಿದ್ದು ಹಸಿಯಾಗಿರುತ್ತದೆ. ಇದರ



ಕೋಡುಗಳು, ಬಾಯಿರಚನೆ

ಕುತ್ತಿಗೆಯು ಉದ್ದವಾಗಿದ್ದು ನೆಲದ ಮೇಲಿನ ಹುಲ್ಲನ್ನು ಮೇಯಲು ಅನುಕೂಲವಾಗಿರುತ್ತದೆ. ಕುತ್ತಿಗೆಯ ಕೆಳಭಾಗದಲ್ಲಿ ಜೋತಾಡುವ ತೊಗಲಿಗೆ ಗಂಗೆದೊಗಲು ಎನ್ನುತ್ತಾರೆ. ಆಕಳ ಬಾಯಿಯಲ್ಲಿ ಮೇಲ್ಭಾಗದ ಮುಂದಿನ ದವಡೆಯಲ್ಲಿ ಹಲ್ಲುಗಳಿರುವದಿಲ್ಲ. ಆದರೆ ಅದು ಒಳ್ಳೆ ಗಟ್ಟಿಯಾಗಿರುತ್ತದೆ. ಕೆಳದವಡೆಯಲ್ಲಿ ಎಂಟು ಹಲ್ಲುಗಳಿರುತ್ತವೆ. ಇದಕ್ಕೆ ಮೂಲದ ಹಲ್ಲುಗಳಿರುವದಿಲ್ಲ.

ಇದರ ಧಡವು ಗಡುತರವಾಗಿರುತ್ತದೆ. ಇದರ ಕೆಳಭಾಗದಲ್ಲಿ ನಾಲ್ಕು ಕಾಲುಗಳಿರುತ್ತವೆ. ಕಾಲುಗಳ ಕೆಳಭಾಗದಲ್ಲಿ ಬಿರುಸಾದ ಸೀಳಿದ ಕೊಳಗಗಳಿರುತ್ತವೆ. ಈ ಕೊಳಗಗಳ ಮೇಲ್ಭಾಗದಲ್ಲಿ ಉತ್ತತ್ತಿಯ ಗಾತ್ರದ ಬಿಡಿಕೊಳಗಗಳಿರುತ್ತವೆ. ಹಿಂಗಾಲುಗಳ ನಡುವೆ ಧಡಕ್ಕೆ ಹೊಂದಿ ನಾಲ್ಕು ಮೊಲೆಗಳಿಂದ ಕೂಡಿದ್ದ



ಕೊಳಗಗಳು

ಕೆಚ್ಚಲವಿರುತ್ತದೆ. ಶರೀರ ಹಿಂಭಾಗದಲ್ಲಿ ಕೂದಲಿನ ಗೊಂಡೆಯುಳ್ಳ ಉದ್ದ ವಾದ ಬಾಲವಿರುತ್ತದೆ. ಬಾಲದಿಂದ ಆಕಳು ತನ್ನ ಮೈಮೇಲಿನ ನೊಣ ಗಳನ್ನು ಜಾಡಿಸಿಕೊಳ್ಳುತ್ತವೆ.

ಆಕಳು ಹೊಟ್ಟು, ಸೊಪ್ಪೆ, ಕಾಳು, ತೌಡು, ಮುಸುರಿ ಮುಂತಾದವು ಗಳನ್ನು ತಿನ್ನುವದು. ಅಡವಿಯಲ್ಲಿ ಅಡ್ಡಾಡಿ ಮೇಯುವದು ಇವಕ್ಕೆ ಹೆಚ್ಚು ಸೇರುತ್ತದೆ. ಇದು ನೆಲದಮೇಲಿನ ಹುಲ್ಲನ್ನು ನಾಲಗೆಯಿಂದ ಒಟ್ಟುಗೂಡಿಸಿ ಮುಂದಿನ ಕೆಳದವಡೆಯ ಹಲ್ಲು ಹಾಗು ಮೇಲಿನ ಗಟ್ಟಿಯಾದ ದವಡೆ ಇವು ಗಳಿಂದ ಹಿಡಿದು ಕೊಡಹಿ ಹರಿದು ತಿನ್ನುವದು. ಇವಕ್ಕೆ ಕ್ರೂರ ಪ್ರಾಣಿಗಳ ಭಯವು ಬಹಳ. ಆದರಿಂದ ಇದು ತನ್ನ ಆಹಾರವನ್ನು ಅವಸರದಿಂದ ಅಬದುಜಬದು ತಿಂದು ನುಂಗಿಬಿಡುವದು. ಆಗ ಅದು ಅದರ ಹೊಟ್ಟೆಯ



ಮೆಲಕಾಡಿಸುವದು

೧ನೆಯ ಚೀಲಕ್ಕೂ ಕ್ರಮೇಣ ೨ನೆಯ ಚೀಲಕ್ಕೂ ಹೋಗುವದು. ಇದು ತನ್ನ ವಿಶ್ರಾಂತಿಯ ಕಾಲದಲ್ಲಿ ೨ನೆಯ ಚೀಲದಿಂದ ಆಹಾರವನ್ನು ಪುನಃ ಬಾಯಿಯಲ್ಲಿ ತಂದು ಚೆನ್ನಾಗಿ ನುರಿಸಿ ನುಂಗಲು ಅದು ೩ನೆಯ ಚೀಲದಲ್ಲಿ ಬರುವದು. ಇದಕ್ಕೆ 'ಮೆಲುಕಾಡಿಸುವಿಕೆ' ಅನ್ನುತ್ತಾರೆ.

ಆಕಳು ಕಟ್ಟಿದ ಮೇಲೆ (ಗಬ್ಬವಾದ ಮೇಲೆ) ೯ ತಿಂಗಳಿಗೆ ಒಂದೇ ಹೆಣ್ಣು ಅಥವಾ ಗಂಡುಕರುವನ್ನು ಈಯುವದು. ಗಂಡು ಕರುವಿಗೆ

ಹೋರಿಯೆನ್ನುವರು. ಅದು ತನ್ನ ಕರುಗಳನ್ನು ಬಹಳ ಪ್ರೀತಿಸುತ್ತದೆ. ಕರುವು ಮೊಲೆಯುಣ್ಣುವಾಗ ಆಕಳು ಅವನ್ನು ತನ್ನ ಮುಳ್ಳು ಮುಳ್ಳಾದ ನಾಲಗೆಯಿಂದ ನೆಕ್ಕುತ್ತದೆ. ಆಕಳು ಸಾಧಾರಣ ೮–೯ ತಿಂಗಳು ಹಿಂಡುವದು. ಇದು ಬಹುತರ ೨ ವರುಷಗಳಿಗೊಮ್ಮೆ ಈಯುವದು.

ಇವರ ಹಾಲು ತೆಳ್ಳಗಿದ್ದು ರುಚಿಕರವೂ ಆರೋಗ್ಯಕರವೂ ಆಗಿದೆ. ಆದರಿಂದ ಅದನ್ನು ಸಣ್ಣ ಮಕ್ಕಳಿಗೆ ಕುಡಿಸಲು ಹೆಚ್ಚಾಗಿ ಉಪಯೋಗಿಸುವರು. ಅಲ್ಲದೆ ಇವರ ಹಾಲಿನಿಂದ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪಗಳನ್ನು ಮಾಡುತ್ತಾರೆ. ಇವರ ಹಾಲು, ತುಪ್ಪ, ಸೆಗಣಿ, ಮೂತ್ರ ಮೊದಲಾದವುಗಳನ್ನು ಪವಿತ್ರವೆಂದೆಣಿಸಿ ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸುವರು. ಸೆಗಣಿ–ಮೂತ್ರಗಳಿಂದ ಉತ್ತಮ ಗೊಬ್ಬರವನ್ನು ಮಾಡಿ ಹೊಲಗಳಿಗೆ ಹಾಕುವರು. ಕೊಂಬುಗಳಿಂದ ಬಾಚಣಿಕೆ, ಗುಂಡಿಗಳನ್ನೂ ಎಲುಬಿನಿಂದ ಗೊಬ್ಬರವನ್ನೂ ತಯಾರಿಸುತ್ತಾರೆ. ಹೋರಿಗಳು ದೊಡ್ಡವಾದ ಮೇಲೆ ಹೊಡಲಿಕ್ಕೆ ಉಪಯೋಗಿಸಲ್ಪಡುತ್ತವೆ. ಆಕಳು ಸುಮಾರು ೨೦ ವರ್ಷ ಬಾಳುತ್ತದೆ. ಸತ್ತಮೇಲೆ ಇವರ ಚರ್ಮದಿಂದ ಮಿಣಿ, ಕಣ್ಣಿಗಳನ್ನು ಮಾಡುತ್ತಾರೆ.



ಅಮೃತಮಹಾಲ ಆಕಳು

ಆಕಳುಗಳಲ್ಲಿ ಅಮೃತಮಹಾಲ ಆಕಳು, ಕೃಷ್ಣಾತೀರದ ಆಕಳು, ಸಿಂಧೀ ಆಕಳು, ಗುಜರಾಥಿ ಆಕಳು ಎಂದು ಹಲವು ಪ್ರಕಾರಗಳಿರುತ್ತವೆ. ಕೃಷ್ಣಾತೀರದ ಆಕಳು ಗಡುತರವಾಗಿದ್ದು ಹೆಚ್ಚು ಎತ್ತರವಾಗಿರುತ್ತವೆ. ಇವುಗಳಿಗೆ ಹೊಳೆಸಾಲ ಆಕಳುಗಳೆನ್ನುವರು. ಇವುಗಳ ಹೈನವೂ ಹೆಚ್ಚು. ಅಮೃತಮಹಾಲ ಆಕಳುಗಳು

ಎತ್ತರವಾಗಿದ್ದು ಚಪಲವೂ ಸುಂದರವೂ ಇರುತ್ತವೆ. ಇವುಗಳಿಂದ ಹುಟ್ಟಿದ ಹೋರಿಗಳು ಉತ್ತಮವಾಗಿರುವದರಿಂದ ಹೆಚ್ಚು ಬೆಲೆ ಬಾಳುವವು. ಸಿಂಧಿ ಆಕಳುಗಳು ಗಾತ್ರದಲ್ಲಿ ದೊಡ್ಡವಿದ್ದು ಅವುಗಳ ಹಿಂಭಾಗವು ಮುಂಭಾಗಕ್ಕಿಂತಲೂ ಹೆಚ್ಚು ಗಡುತರವಾಗಿರುತ್ತದೆ. ಇವು ಹೆಚ್ಚು ಹಾಲನ್ನು ಕೊಡುವವು. ಅವುಗಳಿಂದ ದೊರೆಯುವ ಹೋರಿಗಳು ಒಳ್ಳೇ ಬಲವುಳ್ಳವಿರುವದರಿಂದ ಒಕ್ಕಲುತನದ ಕೆಲಸಕ್ಕೆ ಹೆಚ್ಚು ಉಪಯೋಗವಾಗುವವು.



ಸಿಂಧಿ ಆಕಳು

## ಅಭ್ಯಸನಗಳು

(೧) ಆಕಳಿಗೆ ಕೋಡು, ಉದ್ದವಾದ ಕಿವಿ, ಬಾಲಗಳಿಂದ ಏನು ಉಪಯೋಗವು?

(೨) ಆಕಳ ಶೈನವು ಶ್ರೇಷ್ಠವೂ ಪವಿತ್ರವೂ ಆಗಿರುವದು ಹೇಗೆ?

(೩) ಆಕಳು ತನ್ನ ವಿಶ್ರಾಂತಿ ಕಾಲದಲ್ಲಿ ಮೆಲುಕಾಡಿಸುವದು. ಏಕೆ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ:—

(ಅ) ಇವರ ಹಾಲು ತೆಳ್ಳಗಿದ್ದು ............ಆಗಿದೆ.

(ಬ) ಇವರ............ಪವಿತ್ರವೆಂದು ............ಕಾರ್ಯಗಳಲ್ಲಿ ಉಪಯೋಗಿಸುತ್ತಾರೆ.

(ಕ) ಇವರ............ಗೊಬ್ಬರಕ್ಕೂ ............ಮಣೆ ಕಣ್ಣ ಮಾಡಲಿಕ್ಕೂ ಉಪಯೋಗಿಸುವರು.

(೫) ಆಕಳದಿಂದ ಒಕ್ಕಲುತನಕ್ಕೆ ಹೆಚ್ಚು ಉಪಯೋಗವಾಗುವದು ಹೇಗೆ?

# ಎತ್ತು



ಜವಾರಿ ಎತ್ತು

ಆಕಳಗ ಗಂಡು ಪೀಳಿಗೆಯಾದ ಹೋರಿಯೇ ಬೆಳೆದು ಎತ್ತಾಗುವದು. ಇದು ಆಕಾರದಲ್ಲಿ ಆಕಳಂತಿದ್ದರೂ ಅದಕ್ಕಿಂತ ದೊಡ್ಡದೂ ಬಲವುಳ್ಳದ್ದೂ ಇರುತ್ತದೆ. ಇದರ ಕುತ್ತಿಗೆಯ ಮೇಲ್ಗಡೆಯ ಹಿಂಭಾಗದಲ್ಲಿ ಮಾಂಸದ ಗಡುತರವಾದ ಮುದ್ದೆಯಿರುತ್ತದೆ. ಅದಕ್ಕೆ ಇಣಿಯೆನ್ನುತ್ತಾರೆ. ಇದರಿಂದ ಎತ್ತು ಬಹುಸುಂದರವಾಗಿ ತೋರುವದು. ಎತ್ತಿನ ಕುತ್ತಿಗೆಯು ದಪ್ಪವಾಗಿದ್ದಷ್ಟು ಅದು ಬಲವುಳ್ಳದ್ದೆಂದು ತಿಳಿಯುತ್ತಾರೆ.

ಇದು ಆಕಳದಂತೆ ಹೊಟ್ಟು, ಮೇವು, ಕಾಳು ಮೊದಲಾದವುಗಳನ್ನು ತಿನ್ನುವದು. ಹೋರಿಗಳು ಚಿಕ್ಕವಿರುವಾಗಿನಿಂದಲೇ ಒಕ್ಕಲಿಗರು ಅವುಗಳಿಗೆ ಪೌಷ್ಟಿಕ ಆಹಾರವನ್ನು ತಿನಿಸಿ ಬಹು ಪ್ರೀತಿಯಿಂದ ರಕ್ಷಿಸುವರು. ಅದರಿಂದ ಅವು ಬೆಳೆದು ಗಡುತರವೂ ಬಲವುಳ್ಳವೂ ಆಗುವವು. ಹುಟ್ಟಿದ ಮೂರು ವರ್ಷಗಳ ಮೇಲೆ ಇವು ಹೂಡಲಿಕ್ಕೆ ತಕ್ಕವಾಗುವವು. ಆಗ ಅವುಗಳಿಗೆ ಕಸಿಮಾಡಿ (ತರಡು ಬಡಿಸಿ) ಹೂಡಲು ಉಪಯೋಗಿಸುವರು. ಇವು ಮುಂದೆ ೧೨-೧೪ ವರ್ಷಗಳ ವರೆಗೆ ಉತ್ತಮ ರೀತಿಯಲ್ಲಿ ಕೆಲಸ ಕೊಡುವವು. ಇವುಗಳ ಬಲವಾದ ಕುತ್ತಿಗೆಯ ಮೇಲೆ ಚಕ್ಕಡಿ, ರಂಟೆ ಮುಂತಾದವುಗಳ ನೊಗಗಳನ್ನು ಹೇರಿ ಹಗ್ಗದಿಂದ ಕಟ್ಟಿ ಅವುಗಳನ್ನು ಎಳೆಸುವರು. ಆಗ

ಇವು ಬೇಕಾದತ್ತ ಜಗ್ಗಬಾರದೆಂದು ಮೂಗಿನಲ್ಲಿ ದಾರ ಪೋಣಿಸಿ ಅದಕ್ಕೆ ಹಗ್ಗ ಹಚ್ಚಿ ಹಿಡಿಯುವರು. ಅವಕ್ಕೆ ಮೂಗದಾರ (ಮುಗದಾಣ) ಅನ್ನುವರು. ಕಸಿಮಾಡದೆ ಇದ್ದ ಹೋರಿಗಳಿಗೆ ಬೀಜದ ಹೋರಿಗಳೆನ್ನುವರು. ಇಂಥ ಒಂದೆರಡು ಬೀಜದ ಹೋರಿಗಳನ್ನು ದೇವರ ಹೆಸರಿನಲ್ಲಿ ಬಿಟ್ಟಿರುತ್ತಾರೆ. ಅವುಗಳಿಗೆ 'ಗೂಳಿ' ಎಂತಲೂ ಕರೆಯುವರು. ಎತ್ತುಗಳಲ್ಲಿ ಅವುಗಳ ಆಕಾರ, ಬಲ, ಚಪಲತೆಗಳಿಗನುಸರಿಸಿ ಹೊಳೆಸಾಲ, ಜವಾರಿ, ಸೀಮೆಯ ದನ (ಮೂಡಲ) ಮುಂತಾದ ಜಾತಿಗಳನ್ನು ಕಲ್ಪಿಸಿರುವರು.



ಕಾಠೇವಾಡದ ಎತ್ತು

ಕಾಠೇವಾಡ ಮತ್ತು ಕೃಷ್ಣಾತೀರದ ಎತ್ತುಗಳಿಗೆ ಹೊಳೆಸಾಲ ಎತ್ತುಗಳೆಂದು ಅನ್ನುವರು. ಇವುಗಳ ಗಾತ್ರ ದೊಡ್ಡದು. ಹಣೆಯು ಅಗಲವಾದದ್ದು. ಕಿವಿಗಳು ಉದ್ದವಾಗಿದ್ದು ಜೋತು ಬಿದ್ದಿರುತ್ತವೆ. ಕೋಡುಗಳು ತುಸು ಕಿರಿದಾಗಿರುತ್ತವೆ. ಇವುಗಳ ಹೊಕ್ಕಳ ತೊಗಲು ಇಳಿಬಿದ್ದಿರುತ್ತವೆ. ಇವು ಸ್ವಭಾವದಿಂದ ಮಂದ; ಇವು



ಕೃಷ್ಣಾತೀರದ ಎತ್ತು

ಒಳ್ಳೇ ಬಲಿಷ್ಠವಿರುವದರಿಂದ ಹೆಚ್ಚು ಭಾರವನ್ನು ಜಗ್ಗುವದಕ್ಕೆ ಇವುಗಳನ್ನು ಉಪಯೋಗಿಸುತ್ತಾರೆ.



ಅಮೃತಮಹಾಲ ಎತ್ತು

ಹಿಲಾರಿ ಮತ್ತು ಅಮೃತಮಹಾಲ ಎತ್ತುಗಳು ಸಾಮಾನ್ಯ ಆಕಳು ಮತ್ತು ಉತ್ತಮ ಜಾತಿಯ ಬೀಜದ ಹೋರಿಗಳ ಸಂಯೋಗದಿಂದ ಹುಟ್ಟುವವು. ಇಂಥ ಎತ್ತುಗಳು ಮೈಸೂರು ಸೀಮೆಯಲ್ಲಿ ಹೆಚ್ಚಾಗಿ ಸಿಗುತ್ತವೆ. ಆದ್ದರಿಂದ ಇವುಗಳಿಗೆ ಸೀಮೆಯ ದನಗಳೆಂದೂ ಮೂಡಲ ಎತ್ತುಗಳೆಂದೂ ಅನ್ನುವರು. ಇವುಗಳ ಶರೀರ ಮಾನವು ತಕ್ಕಷ್ಟು ಇದ್ದು, ಇವು ಚಪಲವೂ ಸುಂದರವೂ ಆಗಿರುತ್ತವೆ. ಇವು ಹೆಚ್ಚುಕಾಲ ಬಾಳುವವು.



ಹಿಲಾರಿ ಎತ್ತು

ಆದರೆ ಜವಾರಿ ಎತ್ತುಗಳು ಹೊಳೆಸಾಲ ಎತ್ತುಗಳಂತ ಅಷ್ಟೊಂದು ಬಲವುಳ್ಳವೂ ಅಲ್ಲ. ಸೀಮೆಯ ದನಗಳಂತೆ ಚಪಲತೆಯುಳ್ಳವೂ ಅಲ್ಲ. ಇವು ಸಾಮಾನ್ಯ ತರಗತಿಯ ಎತ್ತುಗಳಾಗಿರುತ್ತವೆ.

ಪೂರ್ವಕಾಲದಲ್ಲಿ ಎತ್ತಿನ ಮೇಲೆ ಕಂಟಲಿಯನ್ನು ಹೇರಿ ವ್ಯಾಪಾರದ ಸರಕುಗಳನ್ನು ಸಾಗಿಸುತ್ತಿದ್ದರು. ಅಲ್ಲದೆ ಬೆನ್ನಮೇಲೆ ಸವಾರರನ್ನು [illegible] ಹತ್ತಲಿಕ್ಕೂ ಉಪಯೋಗಿಸುತ್ತಿದ್ದರು. ಈಗ ಆ ಪದ್ಧತಿಯು ಕಡಿಮೆಯಾಗಿದೆ.

ಕೊಳ್ಳುವರು. ಇದಲ್ಲದೆ ಎತ್ತುಗಳನ್ನು ಗಾಣಕ್ಕೆ ಮತ್ತು ಕಪ್ಪಲಿಗೆ ಹೂಡುವದುಂಟು.

ಎತ್ತು ಅಥವಾ ಹೋರಿಯು ಈಶ್ವರನ ವಾಹನವಾದ ನಂದಿಯು ಎಂದು ತಿಳಿದು ಅವರ ಬಗ್ಗೆ ಒಕ್ಕಲಿಗರು ಪೂಜ್ಯ ಭಾವದಿಂದ ನಡೆಯುತ್ತಾರೆ. ಪ್ರತಿ ಸೋಮವಾರ ಎಷ್ಟೋ ಜನರು ಅವುಗಳನ್ನು ಪೂಜಿಸುತ್ತಾರೆ. ಒಕ್ಕಲತನವೇ ಮುಖ್ಯವಾದ ಈ ನಮ್ಮ ಭರತಖಂಡದಲ್ಲಿ ಹೊಲಗೆಲಸಗಳಲ್ಲಿ ಎತ್ತುಗಳನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ.

## ಅಭ್ಯಸನಗಳು

(೧) ಆಕಳ ಹಾಗು ಎತ್ತುಗಳಲ್ಲಿರುವ ಭೇದಗಳಾವವು?
(೨) ಬೀಜದ ಹೋರಿಗಳೆಂದರೆ ಯಾವವು?
(೩) ಹೆಚ್ಚು ಕಾಲ ಬಾಳುವ ಎತ್ತುಗಳಾವವು?
(೪) ಎತ್ತು ಬಲವುಳ್ಳದ್ದೆಂಬದು ಯಾತರದಿಂದ ತಿಳಿಯುವದು?

### ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

[ಅ] ಹುಟ್ಟಿದ.. .........ಮೇಲೆ.. ... .. ...ತಕ್ಕವಾಗುವವು.
[ಬ] ಕುತ್ತಿಗೆಯ ಮೇಲೆ......... ...ಹೇರಿ............ಎಳೆಸುವರು.
[ಕ] ಎತ್ತಿನ ಮೇಲೆ.........ಹೇರಿ ವ್ಯಾಪಾರದ.. ......ಸಾಗಿಸುತ್ತಿದ್ದರು.

# ಎಮ್ಮೆ



ಎಮ್ಮೆ

ಇದು ಆಕಳದಂತೆ ಹೈನಕ್ಕಾಗಿ ಸಾಕುವ ಪ್ರಾಣಿಯು. ಆದಕ್ಕಿಂತಲೂ ತುಸು ದೊಡ್ಡದು. ಇದು ಸ್ವಭಾವದಿಂದ ಮಂದವು. ಸಾಧಾರಣವಾಗಿ ಇದರ ದೇಹದ ರಚನೆಯು ಆಕಳದಂತೆಯೇ ಇರುತ್ತದೆ. ಆದರೆ ಇದರ ಮೈದೊಗಲು ಮಾತ್ರ ಆಕಳ ಮೈದೊಗಲಿಗಿಂತ ದಪ್ಪವಾಗಿರುವದು. ಆದರಿಂದ ನೊಣಗಳ ಕಡಿತದಿಂದ ಇದಕ್ಕೆ ಅಷ್ಟೊಂದು ಬಾಧೆಯೆನಿಸುವದಿಲ್ಲ. ಇದರ ದಪ್ಪ ತೊಗಲು ಬಿಸಿಲಿನಲ್ಲಿ ತೀವ್ರ ಕಾಯುತ್ತದೆ. ಆ ತಾಪವನ್ನು ತಡೆಯಲಾರದೆ ಇದು ನೀರು, ಕೆಸರು ಅಥವಾ ತಂಪಾದ ಸ್ಥಳವನ್ನು ಹೆಚ್ಚಾಗಿ ಆಶ್ರಯಿಸುತ್ತದೆ. ಇದರ ಕೋಡುಗಳು ತಲೆಯ ಮೇಲೆ ನೆಟ್ಟಗಿರದೆ ಹಿಂದಕ್ಕೆ ಬಾಗಿ ತುಸು ಮೇಲಕ್ಕೆದ್ದಿರುವವು. ಕೆಲವು ಎಮ್ಮೆಗಳ ಕೋಡು ಉದ್ದವಾಗಿದ್ದು, ಚೂಪಾಗಿರುವವು. ಕೆಲವುಗಳ ಕೋಡು ಕೆಳಕ್ಕೆ ಬಗ್ಗಿ ಪುನಃ ಮೇಲಕ್ಕೆದ್ದು ಒಪ್ಪುತ್ತಿರುವವು. ಬಾಲವು ಆಕಳ ಬಾಲದಂತಿದ್ದರೂ ತುಸು ಕಿರಿದಾಗಿರುತ್ತದೆ. ಇದಕ್ಕೆ ಆಕಳದಂತೆ ಕುತ್ತಿಗೆಯ ಕೆಳಗೆ ಗಂಗೆದೊಗಲು ಇರುವದಿಲ್ಲ.

ಎಮ್ಮೆಯು ಹೊಟ್ಟು, ಸೊಪ್ಪೆ, ಕಾಳುಕಡಿ, ಹುಲ್ಲು ಮುಂತಾದವುಗಳನ್ನು ತಿನ್ನುವದು. ಇದು ಮುಸುರೆಯ ನೀರಿನ ಮೇಲೆ ಹೆಚ್ಚು ಪ್ರೀತಿ ಇದಕ್ಕೆ ಆಹಾರವು ಹೆಚ್ಚು ಬೇಕು. ಆಕಳದಂತೆ ಇದೂ ತನ್ನ ಆಹಾರವನ್ನು ಅಬಡುಜಬಡಾಗಿ ತಿಂದು ಮೆಲಕಾಡಿಸುವ ಪ್ರಾಣಿಯಾಗಿದೆ.

ಇದು ಕಟ್ಟಿ ೧೧ ತಿಂಗಳಿಗೆ ಈಯುವದು. ಸರತಿಗೆ ಒಂದೇ ಕರುವನ್ನು ಕೊಡುವದು ಹೆಣ್ಣು ಕರುವಿಗೆ ಕರುವೆಂತಲೂ ಗಂಡು ಕರುವಿಗೆ ಕೋಣವೆಂತಲೂ ಕರೆಯುವರು. ಇದು ತನ್ನ ಕರುವನ್ನು ಅಷ್ಟೊಂದು ಪ್ರೀತಿಸುವದಿಲ್ಲ. ಆದ್ದರಿಂದ ಗವಳಿಗ ಮೊದಲಾದ ಎಷ್ಟೋ ಜನರು ಇದನ್ನು ಕರುವಿಲ್ಲದೆ ಹಿಂಡುತ್ತಿರುತ್ತಾರೆ. ಇವರ ಹೈನವು ಆಕಳುಗಳಿಗಿಂತ ಹೆಚ್ಚು. ಮತ್ತು ಹಾಲಿಗೆ ಹೆಡಸೂ ಬಹಳ. ಇವರ ಹಾಲಿನಿಂದ ಮೊಸರು, ಬೆಣ್ಣೆಗಳನ್ನು ಮಾಡುವರು ಹೆಚ್ಚು ಹಾಲು ಕೊಡುವದರಲ್ಲಿ ಗುಜರಾಥದ ಎಮ್ಮೆ, ದಿಲ್ಲಿ ಎಮ್ಮೆಗಳು ಹೆಸರು ಪಡೆದಿವೆ.



ಗುಜರಾಥದ ಎಮ್ಮೆ

ಕೆಲವು ಕಡೆಗಳಲ್ಲಿ ಬರಡು (ಕಟ್ಟದಿದ್ದ) ಎಮ್ಮೆಗಳನ್ನು ಎತ್ತಿಗಳಂತೆ ಹೂಡುವದಕ್ಕೂ ಉಪಯೋಗಿಸುತ್ತಾರೆ. ಇವುಗಳ ಶಗಣಿ, ಮೂತ್ರಗಳಿಂದ ಉತ್ತಮವಾದ ಗೊಬ್ಬರವು ತಯಾರಾಗುತ್ತದೆ ಇದು ಸಾಧಾರಣ ೨೦ ವರ್ಷಗಳವರೆಗೆ ಬಾಳಬಲ್ಲದು. ಇವರ ತೊಗಲಿನಿಂದ ಕಪ್ಪಲಿ, ಜೋಡು, ಮಿಣಿ, ಕಣಿಗಳನ್ನು ಮಾಡುತ್ತಾರೆ.



ದಿಲ್ಲಿ ಎಮ್ಮೆ

ಯಕ್ಕಲ್ಲದೆ, ಒಡ್ಡರು ಕಲ್ಲುಗಳ ಬಂಡಿಗಳಿಗೂ ತೋಟಿಗರು ಯಾತ ಹೊಡೆಯುಲಿಕ್ಕೂ ಉಪಯೋಗಿಸುವರು.

ಇದರ ತೊಗಲು ಎಮ್ಮೆಯ ತೊಗಲಿನಂತೆ ಜೋಡು, ಕಪ್ಪಲಿ, ಮಿಣಿ, ಕಣ್ಣಿಗಳಿಗೆ ಉಪಯೋಗವಾಗುತ್ತದೆ. ಮತ್ತು ಇದರ ಮೂತ್ರ, ಶಗಣಿಗಳಿಂದ ಉತ್ತಮವಾದ ಗೊಬ್ಬರವಾಗುವದು.

## ಅಭ್ಯಸನಗಳು

(೧) ಎಮ್ಮೆ ಎತ್ತು ಆಕಳುಗಳ ಶರೀರದಲ್ಲಿ ಕಂಡು ಬರುವ ಭೇದಗಳಾವವು?

(೨) ಎಮ್ಮೆ ಮತ್ತು ಆಕಳುಗಳ ಹೈನದಲ್ಲಿ ತೋರುವ ಹೆಚ್ಚು ಕಡಿಮೆಯೇನು?

(೩) ಮಲೆನಾಡಿನವರು ಕೋಣಗಳನ್ನು ಹೆಚ್ಚಾಗಿ ಸಾಕುತ್ತಾರೆ, ಏಕೆ?

(೪) ಕೆಳಗೆ ಬರೆದವುಗಳಿಗೆ ಯೋಗ್ಯ ಕಾರಣ ಕೊಡಿರಿ.

(ಅ) ಎಮ್ಮೆಯು ಹಾಲನ್ನು ಮಕ್ಕಳಿಗೆ ಹಾಕುವದಿಲ್ಲ.

(ಆ) ಕೋಣವು ಬೆಳವಲದಲ್ಲಿ ಹೆಚ್ಚು ಕಾಲ ಬಾಳಲಾರದು.

### ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

(ಅ) ಎಮ್ಮೆಯು ಮೈಯು............ನಿಂದ ಕಾಯುತ್ತದೆ. ಆದ್ದರಿಂದ ಅದು.......ಗಳನ್ನು ಆಶ್ರಯಿಸುತ್ತದೆ.

(ಆ) ಎಮ್ಮೆಯ ಹಾಲಿಗೆ.......ಬಹಳ.

(ಇ) ದೇವರ ಹೆಸರಿನಿಂದ ಬಿಟ್ಟ ಕೋಣಗಳನ್ನು.........ಗಳೆಂದು ಉಪಯೋಗಿಸುತ್ತಾರೆ.

(ಈ) ಬರಡು ಎಮ್ಮೆಗಳನ್ನು..........ದಕ್ಕೂ ಉಪಯೋಗಿಸುತ್ತಾರೆ.

# ಕುದುರೆ



ಮರಿಯೊಡನೆ ಕುದುರೆ

ಇದು ಎಮ್ಮೆ ಆಕಳುಗಳಂತೆ ಪಶು ವರ್ಗಕ್ಕೆ ಸೇರಿದ ಪ್ರಾಣಿಯು ಇದು ಸಾಧಾರಣ ೪ ರಿಂದ ೬ ಫೂಟಿನವರೆಗೂ ಎತ್ತರವಿರುವದು. ಇದರ ದೇಹ ರಚನೆಯು ಎಮ್ಮೆ ಆಕಳುಗಳಂತಿದ್ದರೂ ಕೊಳಗಗಳು ಮಾತ್ರ ಸೀಳಿರದೆ ಅಖಂಡವಾಗಿರುವವು. ಇದರ ಕಾಲುಗಳು ಉದ್ದವಾಗಿದ್ದು ಬಲಿಷ್ಠವಾಗಿರುತ್ತವೆ. ಇದರಿಂದ ಹೆಚ್ಚಾಗಿ ಓಡಲು ಅನುಕೂಲವಾಗುವದು. ಇದರ ಉದ್ದವಾದ ಕುತ್ತಿಗೆಯು ಮೇಲ್ಭಾಗದಲ್ಲಿ ಕೂದಲುಗಳಿರುತ್ತವೆ. ಅವುಗಳಿಗೆ ಆಯಾಲು ಅನ್ನುತ್ತಾರೆ. ಕುದುರೆಯ ತಲೆಯು ಮೇಲೆ ಕೋಡುಗಳಿಲ್ಲದೆ ನಿಗರಿದ ಕಿವಿಗಳು ಮಾತ್ರ ಇರುತ್ತವೆ. ಅವುಗಳನ್ನು ಇದು ಬೇಕಾದತ್ತ ತಿರುಗಿಸಬಲ್ಲದು. ಸಿಟ್ಟು ಬಂದಾಗ ಇದು ತನ್ನ ಕಿವಿಗಳನ್ನು ಹಿಂದಕ್ಕೆ ಬಾಗಿಸುವದು. ಇದರ ಮುಂದಿನ ಎರಡೂ ವಸಡೆಗಳಲ್ಲಿ ಹಲ್ಲುಗಳಿರುತ್ತವೆ. ಮುಂದಿನ ಹಲ್ಲು ಮತ್ತು ದವಡೆ ಹಲ್ಲುಗಳ ನಡುವೆ ಬರಿಯದಾದ ಸ್ಥಳವಿರುತ್ತದೆ. ಲಗಾಮಿನ ಕಬ್ಬಿಣ ತುಂಡು ಇಲ್ಲಿ ಕೂಡುತ್ತದೆ. ಕುದುರೆಯು ಹಲ್ಲುಗಳಿಂದ ಕಡಿದು ಅಥವಾ



ಕೊಳಗ

ಬಲವಾದ ಹಿಂಗಾಲುಗಳಿಂದ ಒದೆದು ತನ್ನನ್ನು ರಕ್ಷಿಸಿಕೊಳ್ಳುತ್ತದೆ. ಇದರ ಬಾಲವು ಆಕಳ ಬಾಲದಂತೆ ಉದ್ದವಾಗಿರದೆ, ಕಿರಿದಾಗಿದ್ದು ಉದ್ದವಾದ





ಲಗಾಮು ಹಾಕಿದ್ದು

ವಸಡಿ

ಕೂದಲುಗಳಿಂದ ಕೂಡಿರುತ್ತದೆ. ಇವುಗಳಿಗೆ ಜವೆಗಳೆನ್ನುವರು. ಅವುಗಳಿಂದ ಮೈಮೇಲಿನ ನೊಣಗಳನ್ನು ಜಾಡಿಸುತ್ತದೆ.

ಇದು ಹುಲ್ಲು, ಕರಿಕೆ, ಕರಡ, ಬೇಳೆಯ ಕಾಳುಗಳ ಹೊಟ್ಟು ಮುಂತಾದವುಗಳನ್ನು ತಿನ್ನುತ್ತದೆ. ಇದು ಕರಿಕೆ, ಕಡಲೆ, ಹೆಸರುಗಳನ್ನು ಹೆಚ್ಚು ಪ್ರೀತಿಸುತ್ತದೆ. ಆದ್ದರಿಂದ ಕಡಲೆ, ಹೆಸರು ಕೂಡಿದ ಜೋಳ ಇವುಗಳ ದಾಣಿಯನ್ನು ತಿನ್ನಿಸುವರು. ಇದು ಮುಸುರೆಯ ನೀರು ಮುಂತಾದವುಗಳನ್ನು ಕುಡಿಯದೆ ಸ್ವಚ್ಛವಾದ ನೀರನ್ನೇ ಕುಡಿಯುವದು. ಕುದುರೆಯು ತನ್ನ ಆಹಾರವನ್ನು ಮೊದಲೇ ಚೆನ್ನಾಗಿ ನುರಿಸಿ ತಿನ್ನುತ್ತದೆ. ಆದ್ದರಿಂದ ಇದು ಎಂದೂ ಮೆಲಕಾಡಿಸುವದಿಲ್ಲ.

ಹೆಣ್ಣು ಕುದುರೆಯು ಗರ್ಭವನ್ನು ಧರಿಸಿದ ಮೇಲೆ ೧೧ ತಿಂಗಳಿಗೆ ಈಯುವದು. ಇದು ಸರತಿಗೆ ಒಂದೇ ಮರಿಯನ್ನು ಕೊಡುವದು. ಇದಕ್ಕೆ ಎರಡೇ ಮೊಲೆಗಳಿರುತ್ತವೆ. ಇದನ್ನು ಎಮ್ಮೆ ಆಕಳುಗಳಂತೆ ಹಿಂಡುವದಿಲ್ಲ. ಮರಿಯು ತಾಯಿಯ ಮೊಲೆಗಳನ್ನು ಸ್ವೇಚ್ಛೆಯಿಂದ ಕುಡಿದು ಬೆಳೆಯುವದು. ಕುದುರೆಯು ಸುಮಾರು ೨೦-೩೦ ವರ್ಷ ಬಾಳುವದು.

ಕುದುರೆಯು ತೀವ್ರವಾಗಿ ಓಡಬಲ್ಲದು ನೆಲವು ಗಟ್ಟಿ ಇದ್ದಷ್ಟು ಇದಕ್ಕೆ ಒಳ್ಳೇದು. ಇದರ ಬೆನ್ನ ಮೇಲೆ ಜೀನು ಅಥವಾ ಧಡಿಯನ್ನು ಹಾಕಿ ಹತ್ತಿ ಪ್ರವಾಸಕ್ಕೂ, ಬೇಟೆಗೂ ಉಪಯೋಗಿಸುವರು. ಆಗ ಇದಕ್ಕೆ ಸವಾರಿಯ ಕುದುರೆ ಎನ್ನುವರು. ಇದು ಹೆಚ್ಚಾಗಿ ಬೆದರುವ ಪ್ರಾಣಿಯಾದುದರಿಂದ ಸವಾರಿಯ ಮನುಷ್ಯರು ಇದನ್ನು ಅಂಕಿತದಲ್ಲಿಟ್ಟುಕೊಳ್ಳಲು ಇದರ ಬಾಯಿಯಲ್ಲಿ ಲಗಾಮನ್ನು ಹಾಕಿ ಹತ್ತುವರು. ಇದು ಪ್ರವಾಸದಲ್ಲಿ ಎಷ್ಟು ದಣಿದರೂ ಮಲಗುವದಿಲ್ಲ. ನಿಂತುಕೊಂಡೇ ವಿಶ್ರಾಂತಿಯನ್ನು ಪಡೆಯುವದು. ವ್ಯಾಪಾರಸ್ಥರು ಇದರ ಬೆನ್ನು ಮೇಲೆ ಸರಕುಗಳನ್ನು ಹೇರಿ ಊರಿಂದೂರಿಗೆ ಒಯ್ಯುತ್ತಿರುವರು. ಕುದುರೆಗಳನ್ನು ರಥಗಳಿಗೂ, ಟಾಂಗಾಗಳಿಗೂ ಹೂಡುವರು. ಆದರೆ ಎತ್ತು-ಕೋಣಗಳಂತೆ ಕುತ್ತಿಗೆಯ ಮೇಲೆ ಹೂಡದೆ ಇವುಗಳ ಎದೆಗೆ ತೊಗಲಿನ ಪಟ್ಟಿಗಳನ್ನು ಹಾಕಿ ವಾಹನಗಳಿಗೆ ಸಂಬಂಧಿಸಿ ಹೂಡುತ್ತಾರೆ. ಇದು ಸುಂದರವಾದ ಮತ್ತು ತೀವ್ರಗತಿಯ ಪ್ರಾಣಿಯಾದುದರಿಂದ ವಿಲಾಸಕ್ಕೂ, ಜೂಜಾಟಕ್ಕೂ ಉಪಯೋಗಿಸುವರು. ಕುದುರೆಯು ಸೈನ್ಯದ ಒಂದು ಭಾಗವೂ ಆಗಿರುತ್ತದೆ. ಪರದೇಶದವರು ಇದನ್ನು ಬೇಸಾಯಕ್ಕಾಗಿ ಉಪಯೋಗಿಸುತ್ತಿರುವರು. ಯಂತ್ರಗಳ ಶಕ್ತಿಯು ಎಷ್ಟು ಇದೆ ಎಂಬುದನ್ನು ತಿಳಿಯುವದಕ್ಕಾಗಿ ಇದರ ಶಕ್ತಿಯನ್ನೇ ಆಧಾರವಾಗಿ ಇಟ್ಟುಕೊಂಡಿರುವರು.

ಇದು ನಂಬಿಗೆಯ ಪ್ರಾಣಿಯು. ತನ್ನ ಒಡೆಯನನ್ನು ಅನೇಕ ಸಂಕಟಗಳಿಂದ ಪಾರುಮಾಡಬಲ್ಲದು. ಅಲ್ಲದೆ ಪ್ರಸಂಗದಲ್ಲಿ ಒಡೆಯನನ್ನು ಹೊತ್ತುಕೊಂಡು ತುಂಬಿದ ಹೊಳೆಯನ್ನು ಈಸಿ ಪಾರಾಗುವದು. ಇದು ತನ್ನ ಮೈಯನ್ನು ಎಂದೂ ಹೊಲಸು ಮಾಡಿಕೊಳ್ಳುವದಿಲ್ಲ. ಆದರೂ ಇದರ ಮೈಯನ್ನು ತಿಕ್ಕಿ, ಒರೆಸಿ ಸ್ವಚ್ಛವಾಗಿಡಬೇಕಾಗುತ್ತದೆ. ದಸರೆಯಲ್ಲಿ ಇವನ್ನು ಶೃಂಗರಿಸಿ ಮೆರೆಸುವರು.

---

# ಕತ್ತೆ



ಕತ್ತೆ

ಕತ್ತೆಯು ಕುದುರೆಯ ವರ್ಗಕ್ಕೆ ಸೇರಿದ ಪ್ರಾಣಿ. ಇದರ ಶರೀರ ರಚನೆಯು ಹೆಚ್ಚಾಗಿ ಕುದುರೆಯನ್ನೇ ಹೋಲುತ್ತದೆ. ಆದರೆ ಇದರ ಕಿವಿಗಳು ಮಾತ್ರ ತುಸು ಉದ್ದವಾಗಿರುವವು. ಇದು ಕುದುರೆಗಿಂತ ಗಿಡ್ಡವಿದ್ದು ಗಾತ್ರದಲ್ಲಿ ಚಿಕ್ಕದಾಗಿರುತ್ತದೆ. ಕತ್ತೆಗಳು ಬಿಳಿ, ಕರಿ ಅಥವಾ ಬೂದಿ ಬಣ್ಣದವು ಇರುತ್ತವೆ. ಇದರ ಮೈಮೇಲಿನ ಕೂದಲುಗಳು ಕುದುರೆಯ ಕೂದಲಿಗಿಂತ ತುಸು ಉದ್ದವಿದ್ದು ಒರಟು ಇರುತ್ತವೆ. ಇದು ಅಷ್ಟು ಸುಂದರವಾದ ಪ್ರಾಣಿಯು ಅಲ್ಲ. ಇದರ ಮೈಯೂ ಥುಳಥುಳವಾಗಿರುವದಿಲ್ಲ. ಮತ್ತು ಸವಾರಿಯ ಕೆಲಸಕ್ಕೆ ಅಷ್ಟೊಂದು ಉಪಯೋಗವಾಗುವದಿಲ್ಲ. ಆದ್ದರಿಂದ ಶ್ರೀಮಂತರು ಇದನ್ನು ಸಾಕದೆ ಅಗಸರು, ಕುಂಬಾರರು ಮುಂತಾದ ಕೆಲಸಗಾರರು ಭಾರ ಹೊರುವದಕ್ಕಾಗಿ ಮಾತ್ರ ಸಾಕುತ್ತಾರೆ. ಇದರಲ್ಲಿ ಹೇಸರಗತ್ತೆಯೆಂಬ ಇನ್ನೊಂದು ಜಾತಿಯೂ ಇರುವದು. ಅದು ಆಕಾರಮಾನದಿಂದ ಇದಕ್ಕಿಂತ ದೊಡ್ಡದಿರುವದು. ಇದನ್ನು ಸೈನ್ಯದಲ್ಲಿ ಭಾರ ಹೊರುವದಕ್ಕಾಗಿ ಉಪಯೋಗಿಸುತ್ತಾರೆ.

ಕುದುರೆಯಂತೆ ಇದು ಕರಿಕೆ, ಹುಲ್ಲು, ಕರಡ, ಕಾಳುಕಡಿಗಳನ್ನು ತಿನ್ನುತ್ತದೆ. ಆದರೆ ಸಾಕಿದವರು ಇದನ್ನು ಕಟ್ಟಿ ಮೇಯಿಸದೆ ಕಾಲು ಕಟ್ಟಿ ಅಡ್ಡಾಡಲಿಕ್ಕೆ ಮಾತ್ರ ಬಿಡುತ್ತಾರೆ. ಆಗ ಇದು ತಿಪ್ಪಿ ಮುತ್ತು ಬೀದಿಗಳಲ್ಲಿ ಬಿದ್ದ ಕಸಕಡ್ಡಿ, ದಂಟು, ಎಲೆ ಮುಂತಾದವುಗಳನ್ನು ತಿಂದು ನೀರಿಷ್ಟು ಕುಡಿದು ಬದುಕುತ್ತದೆ. ಇದರ ವಾಸಸ್ಥಳವು ಹಾಳು ಮನೆ, ಗೋಡೆಗಳ ಚಾಟು ಆಗಿರುತ್ತದೆ.

ಇದು ಕುದುರೆಯಂತೆ ೧೧ ತಿಂಗಳಿಗೆ ಈಯುವದು. ಸರತಿಗೆ ಒಂದೇ ಮರಿಯನ್ನು ಕೊಡುವದು. ಮರಿಯು ಚಿಕ್ಕದಿದ್ದಾಗ ಬಹು ಸುಂದರವಾಗಿ ಕಾಣುವದು. ಇದು ಕುದುರೆಯಂತೆ ಹಿಂಗಾಲುಗಳಿಂದ ಒದೆದು ಅಥವಾ ಹಲ್ಲುಗಳಿಂದ ಕಡಿದು ತನ್ನ ಹಾಗೂ ತನ್ನ ಮರಿಯ ರಕ್ಷಣೆ ಮಾಡಿಕೊಳ್ಳುತ್ತದೆ.

ಕತ್ತೆಯಲ್ಲಿ ಶ್ರಮವನ್ನು ತಾಳಿಕೊಳ್ಳುವ ಗುಣವಿದೆ. ಆದ್ದರಿಂದ ಇದು ತನ್ನ ಯೋಗ್ಯತೆ ಮೀರಿ ಹೇರಿದ ಭಾರವನ್ನಾದರೂ ಹೊತ್ತುಕೊಂಡು ಹೋಗಬಲ್ಲದು. ಹೆಚ್ಚು ಶ್ರಮವಾದಾಗ ನೆಲದ ಮೇಲೆ ಹೊರಳಾಡಿ ತನ್ನ ದಣಿವನ್ನು ಆರಿಸಿಕೊಳ್ಳುವದು. ಮಲರೋಗಾದಿಗಳು ಬರಬಾರದೆಂದು ಹುಟ್ಟಿದ ಕೂಸುಗಳಿಗೆ ಇದರ ಹಾಲನ್ನು ಕುಡಿಸುತ್ತಿರುವರು. ಇದರ ಎಲುವು ಔಷಧಕ್ಕೆ ಬರುವದೆಂದೂ ಕೆಲವರ ಅಭಿಪ್ರಾಯವಿದೆ.

ಇದು ತನ್ನ ಶಾಂತ ಗುಣಕ್ಕಾಗಿ ಎಷ್ಟೋ ಕಷ್ಟಗಳನ್ನು ಸಹಿಸಬೇಕಾಗುತ್ತದೆ. ಹೋಳೀ ಹುಣ್ಣಿಮೆಯಲ್ಲಿ ಆಗುವ ತೊಂದರೆಯೇ ಇದಕ್ಕೆ ಉದಾಹರಣೆಯಾಗಿದೆ. ಇದರ ಕೂಗು ಕರ್ಕಶವಿರುವದರಿಂದಲೂ ಇದು ಅಂದಗೇಡಿಯಾಗಿರುವದರಿಂದಲೂ ಜನರು ಇದರ ಸದ್ಗುಣಗಳನ್ನು ಮರೆತು ಪಶುಗಳಲ್ಲಿ ಇದನ್ನು ಚಾಂಡಾಲ ಎಂದು ತಿಳಿದಿರುವರು. ಆದ್ದರಿಂದಲೇ ಯಾರನ್ನಾದರೂ ಹೀಯಾಳಿಸುವಾಗ 'ಕತ್ತೆ'ಯೇ ಎಂದು ಇದರ ಹೋಲಿಕೆಯನ್ನು ಕೊಡುವರು. ಇದು ವಿಚಿತ್ರ!

### ಅಭ್ಯಸನಗಳು

**(೧) ಕುದುರೆ ಮತ್ತು ಕತ್ತೆಗಳಲ್ಲಿಯ ಸಾಮ್ಯ ವೈಷಮ್ಯಗಳಾವವು?**

**(೨) ಕುದುರೆಯು ಓಡುವ ಪ್ರಾಣಿಯೆಂಬುದನ್ನು ಅದರ ಯಾವ ಯಾವ ಅವಯವಗಳಿಂದ ತಿಳಿದುಕೊಳ್ಳುವಿರಿ?**

ಕೆಲವು ಆಡುಗಳಿಗೆ ಕೋಡುಗಳೇ ಇರುವದಿಲ್ಲ. ಕೆಲವಕ್ಕೆ ಇದ್ದರೂ ಅವು ಹಿಂದಕ್ಕೆ ಬಾಗಿರುವವು. ಇದರ ಬಾಲವು ಕಿರಿದಾಗಿದ್ದು ಅದರಿಂದ ಆಡಿಗೆ ವಿಶೇಷ ಉಪಯೋಗವಾಗುವದಿಲ್ಲ. ಇದಕ್ಕೆ ಎರಡೇ ಮೊಲೆಗಳಿರುತ್ತವೆ. ಆದರೆ ಕೆಲವು ಆಡುಗಳಿಗೆ ಕೊರಳ ಕೆಳ ಭಾಗದಲ್ಲಿ ಜೋತಾಡುವ ಮೊಲೆಗಳಿದ್ದರೂ ಅವು ನಿರುಪಯುಕ್ತವಾದವುಗಳು.

ಇದು ಎಲ್ಲ ವನಸ್ಪತಿಗಳ ಸೊಪ್ಪನ್ನೂ ಕಾಳುಕಡಿಗಳನ್ನೂ ತಿನ್ನುವದು. ಆದರೆ ಇದು ತಿನ್ನದಿರುವ ಒಂದು ವನಸ್ಪತಿಯೂ ಉಂಟು. ಅದಕ್ಕೆ ಆಡು ಮುಟ್ಟದ ಗಿಡವೆಂದು ಹೆಸರು. ಜಾಲಿ, ಇಪ್ಪಿ ಮೊದಲಾದ ಮುಳ್ಳು ಕಂಟಿಗಳನ್ನು ಇದು ಹೆಚ್ಚಾಗಿ ಪ್ರೀತಿಸುತ್ತದೆ. ಒಮ್ಮೊಮ್ಮೆ ಇದು ತನ್ನ ಹಿಂಗಾಲುಗಳ ಮೇಲೆ ನಿಂತು, ಮುಂಗಾಲುಗಳನ್ನು ಎತ್ತಿ ಕಂಟಿಯ ಮೇಲಿಟ್ಟು ಸಹಜವಾಗಿ



ಆಡುಗಳು

ನಿಲುಕದಿದ್ದ ಸೊಪ್ಪನ್ನು ನಿಲುಕಿಸಿ ತಿನ್ನುವದು. ಕಟ್ಟಿದಲ್ಲಿ ಮೇಯುವದಕ್ಕಿಂತ ಅಡ್ಡಾಡಿ ಮೇಯುವದು ಇದಕ್ಕೆ ಹೆಚ್ಚು ಸೇರುತ್ತದೆ. ಇದು ತನ್ನ ಆಹಾರವನ್ನು ಅವಸರದಿಂದ ತಿಂದು ವಿಶ್ರಾಂತಿಯ ವೇಳೆಯಲ್ಲಿ ಆಕಳದಂತೆ ಮೆಲುಕಾಡಿಸುತ್ತದೆ. ಇದು ಚುರುಕು ಪ್ರಾಣಿಯಾದುದರಿಂದ ತನ್ನ ಆಹಾರಕ್ಕಾಗಿ ಕಡಿದಾದ ಭಾಗವನ್ನು ಏರಲಿಕ್ಕೂ ಎತ್ತರದಿಂದ ಕೆಳಗೆ ಹಾರಲಿಕ್ಕೂ ಸಮರ್ಥವಾಗಿರುತ್ತದೆ.

ಆಡು ಗಬ್ಬವಾದ ಮೇಲೆ ೫ ತಿಂಗಳಿಗೆ ಈಯುವದು. ಸರತಿಗೆ ೧ ರಿಂದ ೩ ರ ವರೆಗೆ ಮರಿಗಳಾಗುವವು. ಗಂಡು ಮರಿಗೆ ಹೋತು ಅನ್ನುವರು. ಮರಿಗಳು ಬೆಳೆದಂತೆ, ಹೋತು ಹೆಣ್ಣು ಮರಿಗಿಂತ ಗಡುತರವೂ ಬಲವುಳ್ಳದ್ದೂ ಆಗುವದು.

ಇದು ವನಸ್ಪತಿಗಳಿಂದ ಹೆಚ್ಚಾಗಿ ತಿನ್ನುವದರಿಂದ ಇದರ ಹಾಲು ರುಚಿಕರವೂ, ಆರೋಗ್ಯಕರವೂ ಇರುತ್ತದೆ. ಆಡಿನ ಹಾಲಿಗೆ ತುಸು ವಾಸನೆಯಿರುತ್ತದೆ. ಆದರೆ ಕುಂಯ್ಯಾಡಿನ ಹಾಲಿಗೆ ಅಂಥ ವಾಸನೆಯು ಇರುವದಿಲ್ಲ. ಆಡಿನ ಪೀಳಿಗೆಯು ತೀವ್ರವಾಗಿ ಬೆಳೆಯುತ್ತದೆ. ಅಲ್ಲದೆ ಆಡಿನ ರಕ್ಷಣೆಗೆ ಹೆಚ್ಚು ಸ್ಥಳವೂ ಹಣವೂ ಬೇಕಾಗಿಲ್ಲ. ಆದ್ದರಿಂದ ಬಡವರು ಇದನ್ನು ಹೆಚ್ಚಾಗಿ ಸಾಕಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಮಾಂಸಾಹಾರಿಗಳು ಇದರ ಮಾಂಸವನ್ನು ಸೇವಿಸುತ್ತಿರುವರು. ಹೋತುಗಳ ಉಪಯೋಗವು ಕೇವಲ ಮಾಂಸಕ್ಕಾಗಿಯೇ ಇರುತ್ತದೆ.

ತನ್ನ ರಕ್ಷಣೆಯನ್ನು ಮಾಡಿಕೊಳ್ಳಲಿಕ್ಕೆ ಅವಶ್ಯವಾದ ಯಾವ ಸಾಧನಗಳೂ ಇದಕ್ಕೆ ಇಲ್ಲದ್ದರಿಂದ ಇದನ್ನು ತೋಳ ಮುಂತಾದ ಪ್ರಾಣಿಗಳು ಸಹಜವಾಗಿ ಹಿಡಿದು ಕೊಂಡು ತಿನ್ನುವವು,

---

## ಕುರಿ





ಕುರಿ

**ಇದು ಸಾಧು ಪ್ರಾಣಿ. ಇದನ್ನು ಆಡಿನಂತೆ ಹೈನಕ್ಕಾಗಿಯೇ ಸಾಕುವ ರೂಢಿಯಿಲ್ಲ. ಇದು ಎಲ್ಲ ಸಂಗತಿಗಳಲ್ಲಿ ಆಡಿನಂತಿದ್ದರೂ ಅದಕ್ಕಿಂತ ತ ಸ**

ಕಿರಿದಾದದ್ದು. ಆದರೆ ನೋಟಕ್ಕೆ ಮಾತ್ರ ಆದಕ್ಕಿಂತ ಗಡುತರವೂ ಗುಂಡಾ
ಕಾರವಾಗಿಯೂ ತೋರುವದು. ಇದರ ಮೈಮೇಲೆ ಆಡಿಗಿರುವಂತೆ ಬಿರುಸು
ಕೂದಲುಗಳಿರದೆ ಮೃದುವಾದ ಕೂದಲುಗಳಿರುತ್ತವೆ. ಅದಕ್ಕೆ ಉಣ್ಣೆಯೆನ್ನು
ತ್ತಾರೆ. ಕುರಿಯು ಆಡಿನಂತೆ ಚಪಲವಾಗಿರದೆ ಸ್ವಭಾವದಿಂದ ಮಂದವು. ಇದು
ಏಕಾಕಿಯಾಗಿ ತಿರುಗಾಡಲಾರದು. ಯಾವ ವಿಚಾರವಿಲ್ಲದೆ ತಲೆ ತಗ್ಗಿಸಿ
ಕೊಂಡು ಮುಂದಿನ ಕುರಿಯನ್ನು ಹಿಂಬಾಲಿಸಿ ಹೋಗುವದೇ ಇದರ ಸ್ವಭಾ
ವವಾಗಿದೆ. ಆದ್ದರಿಂದಲೇ ಪ್ರತಿಯೊಂದು ಕುರಿಯ ಹಿಂಡಿನಲ್ಲಿ ನಾಲ್ಕಾರು
ಆಡುಗಳನ್ನು ಸಾಕುತ್ತಾರೆ. ಈ ಆಡುಗಳೇ ಕುರಿಗಳ ಮಾರ್ಗದರ್ಶಕ
ರಾಗಿವೆ. ಆಡುಗಳಿಲ್ಲದಿದ್ದರೆ ಕುರಿಗಳ ಹಿಂಡನ್ನು ಮುಂದೆ ಒಯ್ಯುವದೇ
ಕಷ್ಟವಾಗುವದು.

ಕುರಿಯು ಆಡಿನಂತೆ ತನ್ನ ಆಹಾರವನ್ನು ಸ್ವತಂತ್ರವಾಗಿ ದುಡುಕಿ
ಕೊಳ್ಳಲಾರದು. ಮತ್ತು ಆದರಂತೆ ಕಡಿದಾದ ಭಾಗವನ್ನು ಏರಲಿಕ್ಕೂ
ಮೇಲಿನಿಂದ ಕೆಳಗೆ ಹಾರಲಿಕ್ಕೂ ಇದಕ್ಕೆ ಬರುವದಿಲ್ಲ. ಇದು ಗಿಡಗಂಟೆಗಳ
ಸೊಪ್ಪನ್ನು ಅವಲಂಬಿಸದೆ ನೆಲದ ಮೇಲಿನ ಹುಲ್ಲನ್ನೇ ಮೇಯುತ್ತಿರುವದು.
ಆದ್ದರಿಂದ ಕುರುಬನು ಹಗಲು ಇವುಗಳನ್ನು ಅಡವಿಯಲ್ಲಿ ಮೇಯಿಸಿ, ಹಳ್ಳ
ಹೊಳೆಗಳ ತಿಳಿ ನೀರು ಕುಡಿಸುವನು. ರಾತ್ರಿಯಲ್ಲಿ ತೋಳ ಮುಂತಾದ
ಕ್ರೂರ ಪ್ರಾಣಿಗಳು ಮುರಿಯಬಾರದೆಂದು ಇವುಗಳನ್ನು ಸುತ್ತಲೂ ಬೇಲಿ
ಯುಳ್ಳ ದಡ್ಡಿಯಲ್ಲಿ ಹಾಕಿ ಬಾಗಿಲಕ್ಕೆ ಕಂಟಿ (ಕದ)ಯನ್ನು ಆನಿಸಿ ಕಾವ
ಲಿಗೆ ನಾಯಿಯನ್ನು ಇಡುವನು.

ಕುರಿಯು ವರ್ಷದಲ್ಲಿ ಎರಡು ಸಾರೆ ಈಯುವದು. ಬಹುತರವಾಗಿ
ಸರತಿಗೆ ಒಂದೇ ಮರಿಯನ್ನು ಕೊಡುವದು. ಗಂಡು ಮರಿಗೆ ಟಗರು
ಎನ್ನುವರು.

ಕುರಿಯ ಹಾಲು ಆಡಿನ ಹಾಲಿಗಿಂತ ಮಂದ(ದಪ್ಪ)ವಾಗಿದ್ದು ಅದಕ್ಕೆ
ಒಂದು ತರದ ಜಿಡ್ಡು ವಾಸನೆಯಿರುತ್ತದೆ. ಆದ್ದರಿಂದ ಈ ಹಾಲು ಸಾರ್ವ
ತ್ರಿಕ ಬಳಿಕೆಯಲ್ಲಿಲ್ಲ. ಆದರೂ ಚಹ, ಕಾಫಿಗಳಲ್ಲಿ ಎಷ್ಟೋ ಜನರು ಇದನ್ನು
ಸೇವಿಸುವರು. ಇದರ ಹಾಲಿನಿಂದ ಬೆಣ್ಣೆಯನ್ನು ತೆಗೆಯುತ್ತಾರೆ. ಮೈಮೇ
ಲಿನ ಉಣ್ಣೆಯು, ಮಳೆ-ಚಳಿಗಾಲದಲ್ಲಿ ಅದನ್ನು ರಕ್ಷಿಸುತ್ತದೆ. ಆದ್ದ
ರಿಂದ ಆಗ ಅದನ್ನು ಕತ್ತರಿಸದೆ ಬೇಸಿಗೆಯಲ್ಲಿ ಮಾತ್ರ ಕತ್ತರಿ

ಸುವರು. ಈ ಉಣ್ಣೆಯಿಂದ ಕಂಬಳಿಗಳನ್ನೂ ಮಾಡುತ್ತಾರೆ. ಅಂಗೋರಾ ಮತ್ತು ಕಾಶ್ಮೀರದ ಕುರಿಗಳ ನಯವಾದ ಉದ್ದ ತಂತುವಿನ ಉಣ್ಣೆಯಿಂದ ರಗ್ಗು, ಶಾಲು, ಜರಿಪೆಗಳನ್ನು ತಯಾರಿಸುವರು. ಮರಿಗಳ ಉಣ್ಣೆಯ ಕಂಬಳಿಯು ಹೆಚ್ಚು ಬಾಳಿಕೆಯುಳ್ಳದ್ದು. ಮಾಂಸಾಹಾರಿಗಳು ಇದರ ಮಾಂಸವನ್ನು ಪ್ರೀತಿಯಿಂದ ತಿನ್ನುವರು. ಕುರಿಯ ಮಲ-ಮೂತ್ರಗಳು ಉತ್ತಮ ಗೊಬ್ಬರವೆನಿಸಿವೆ. ಆದ್ದರಿಂದ ಎಷ್ಟೋ ಒಕ್ಕಲಿಗರು ಕುರುಬರಿಗೆ ಕೆಲವೊಂದು ಹಣ ಅಥವಾ ಕಾಳು ಕೊಟ್ಟು ಇವುಗಳ ಹಿಂಡನ್ನು ತಮ್ಮ ಹೊಲಗಳಲ್ಲಿ ತರುಬಿಸುವರು.

ನಮ್ಮ ದೇಶದ ಹೊರತಾಗಿ ಆಸ್ಟ್ರೇಲಿಯಾ, ನ್ಯೂಝೀಲಂಡ ಮೊದಲಾದ ದೇಶಗಳಲ್ಲಿ ಇವುಗಳನ್ನು ಹೆಚ್ಚಾಗಿ ಸಾಕುತ್ತಾರೆ. ಇವುಗಳಿಂದ ದೊರೆಯುವ ಹೈನ, ಉಣ್ಣೆ ಮತ್ತು ಮಾಂಸಗಳ ವ್ಯಾಪಾರದಿಂದ ತಮ್ಮ ಉಪಜೀವನವನ್ನು ಸಾಗಿಸುತ್ತಾರೆ.



ಅಂಗೋರಾ ಕುರಿ

## ಅಭ್ಯಸನಗಳು

(೧) ಆಡು ಆಕಳನ್ನು ಯಾವ ಯಾವ ಸಂಗತಿಗಳಲ್ಲಿ ಹೋಲುವದು ?
(೨) ಕುರಿ ಮತ್ತು ಆಡುಗಳಲ್ಲಿರುವ ವ್ಯತ್ಯಾಸವನ್ನು ಬರೆಯಿರಿ.
(೩) ಕೂದಲು ಮತ್ತು ಉಣ್ಣೆಗಳಲ್ಲಿರುವ ಭೇದವೇನು ?
(೪) **ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.**

(ಅ) ಆಡು ತನ್ನ.........ನಿಂತು.........ಎತ್ತಿ ಕಂಟಿಯ ಮೇಲಿಟ್ಟು .........ಸೊಪ್ಪನ್ನು.........ತಿನ್ನುವದು.
(ಆ) ಕುರಿಯು.........ಇಲ್ಲದೆ......ಕೊಂಡು .........ಕುರಿಯನ್ನು ಹಿಂಬಾಲಿಸುವದು.

# ನಾಯಿ



ನಾಯಿ

ಇದು ಮನುಷ್ಯನ ಪ್ರಾಣ ಮತ್ತು ಆಸ್ತಿಗಳ ರಕ್ಷಣೆಯ ಪ್ರಾಣಿ. ಇದನ್ನು ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಕಾಣಬಹುದು. ಇದು ಸಾಧಾರಣ ೧–೧½ ಫೂಟಿನಿಂದ ೩ ಫೂಟಿನ ವರೆಗೆ ಎತ್ತರವಿರುತ್ತದೆ. ಇದರ ಮುಖವು ತುಸು ಉದ್ದವಾಗಿರುತ್ತದೆ. ಇದಕ್ಕೆ ಸಾಧಾರಣವಾಗಿ ಉಬ್ಬಿದ ಎದೆ, ಬಾಗಿದ ಬೆನ್ನು, ಒಳಸೇರಿದ ಹೊಟ್ಟೆ, ಉದ್ದವಾದ ಬಾಲ, ಮಡಿಚಿದ ಕಿವಿ, ಮತ್ತು ಗಿಡ್ಡ ಮೊಳಕಾಲುಗಳು ಇರುವವು. ಇಂಥ ಲಕ್ಷಣಗಳುಳ್ಳ ನಾಯಿಯು ಉತ್ತಮವಾದುದೆಂದು ತಿಳಿಯುತ್ತಾರೆ.

ಇದಕ್ಕೆ ಚೂಪಾದ ಹಲ್ಲುಗಳಿರುವದರಿಂದ ಇದು ಮಾಂಸ ಭಕ್ಷಕ ಪ್ರಾಣಿಯೆಂದು ಹೇಳಬಹುದು. ಇದು ಮಾಂಸವನ್ನು ತನ್ನ ಹಲ್ಲುಗಳಿಂದ ಹರಿದು ತಿನ್ನುವದು, ಅಲ್ಲದೆ ಅನ್ನ, ರೊಟ್ಟಿ, ನುಚ್ಚು, ಹಾಲು ಮುಂತಾದವುಗಳನ್ನೂ ತಿನ್ನುವದು. ಇದು ತನ್ನ ಆಹಾರವನ್ನು ನುರಿಸಿ ತಿನ್ನದೆ ಗಪಗಪ ನುಂಗುವದು. ಎಲುವು ಸಿಕ್ಕರಂತೂ ಇದರ ಸಂತೋಷಕ್ಕೆ ನೆಲೆಯಿಲ್ಲ. ನಾಯಿಯು ನೀರನ್ನು ತನ್ನ ಉದ್ದವಾದ ನಾಲಿಗೆಯಿಂದ ಲೊಚ ಲೊಚ ಕುಡಿಯುತ್ತದೆ.

ನಾಯಿಯು ವರ್ಷದಲ್ಲಿ ಎರಡು ಸಾರೆ ಈಯುವದು. ಸರತಿಗೆ ೪-೬ ಮರಿಗಳನ್ನು ಕೊಡುವದು. ಹುಟ್ಟಿದಾಗ ಮರಿಗಳು (ಕುನ್ನಿಗಳು) ತೀರ ಚಿಕ್ಕವಿದ್ದು ಕಣ್ಣು ಮುಚ್ಚಿಕೊಂಡಿರುವವು. ಒಂದು ವಾರದ ನಂತರ ಕಣ್ಣು ತೆರೆಯುವವು. ಮುಂದೆ ಅವು ಕ್ರಮೇಣ ಬೆಳೆದು ದೊಡ್ಡವಾಗುವವು. ಶ್ರೀಮಂತರು ತಮ್ಮ ಆಸ್ತಿಯ ರಕ್ಷಣೆಗಾಗಿ, ಬೇಟೆಗಾರರು ಬೇಟೆಗಾಗಿ, ಕುರುಬರು ಕುರಿಗಳ ಹಿಂಡನ್ನು ಕಾಯುವದಕ್ಕಾಗಿ ಇವುಗಳನ್ನು ಸಾಕುತ್ತಿರುತ್ತಾರೆ. ಕೆಲವರು ವಿನೋದಕ್ಕಾಗಿಯೂ, ಸರ್ಕಸ್ಸಿನವರು ಆಟಗಳಿಗಾಗಿಯೂ ನಾಯಿಗಳನ್ನು ಸಾಕುವದುಂಟು. ಇದು ೧೦-೧೨ ವರ್ಷ ಬಾಳುವದು.

ನಾಯಿಯಲ್ಲಿ ಕೆಲವು ವಿಚಿತ್ರ ಸಂಗತಿಗಳನ್ನು ಕಾಣಬಹುದು. ಇದು ತನ್ನ ನಾಲಿಗೆಯಿಂದ ಬೆವರನ್ನು ಸುರಿಸುವದು. ಕುಕ್ಕೋಟವೇ ಇದರ ನಡಿಗೆ. ಇದು ನಡೆಯುವಾಗ ಇದರ ಉಗುರುಗಳು ನೆಲಕ್ಕೆ ಹತ್ತುವದರಿಂದ ಒಂದು ತರದ ಸಪ್ಪಳವಾಗುವದು ಮತ್ತು ಇವು ಬೆಕ್ಕಿನಂತೆ ಚೂಪಾಗಿರದೆ ಮೊಂಡವಾಗಿರುವವು. ಇದು ತನ್ನ ಬಾಲದ ಕೊನೆಯನ್ನು ಹಿಂಗಾಲುಗಳ ಸಂದುಗಳಲ್ಲಿ ಒಯ್ದರೆ ತನಗೆ ಹೆದರಿಕೆಯೆಂದೂ, ಅಲ್ಲಾಡಿಸಿದರೆ ಪ್ರೀತಿಸುತ್ತದೆಂದೂ ಮತ್ತು ಬಾಲವನ್ನು ಮೇಲಕ್ಕೆ ಸುರುಳಿ ಸುತ್ತಿದರೆ ಕಚ್ಚುವದೆಂದೂ ತಿಳಿಯತಕ್ಕದ್ದು. ಇದರ ಘ್ರಾಣೇಂದ್ರಿಯ (ಮೂಗು) ವು ತೀಕ್ಷ್ಣವಾಗಿರುತ್ತದೆ. ಆದ



ನಾಯಿಯ ಕಾಲುಗಳು

ರಿಂದ ಇದು ಬೇಟೆಯ ಕಾಲಿನಿಂದ ಸ್ರವಿಸಿರುವ ಸ್ವೇದವನ್ನು ವಾಸನೆಯಿಂದ ಕಂಡು ಹಿಡಿಯುತ್ತದೆ. ನೆಲವನ್ನು ಮೂಸಿ ನೋಡಿ ಬೇಟೆ ಪ್ರಾಣಿಯು ಹೋದ ಮಾರ್ಗವನ್ನು ಕಂಡುಕೊಳ್ಳುವದು. ನಾಯಿಗಳಿಗೆ ಕೆಲವು ಸಾರೆ ಹುಚ್ಚು ಹಿಡಿಯುವದು. ಅಂಥ ನಾಯಿಗಳು ಕಂಡವರನ್ನು ಕಚ್ಚುತ್ತ ಹೋಗುವವು. ಅದರಿಂದ ನಂಜು ಏರಿ ಮನುಷ್ಯನು ಸಾಯುವನು. ಆದ್ದರಿಂದ ಇಂಥ ನಾಯಿಗಳ ಬಗ್ಗೆ ನಾವು ಎಚ್ಚರದಿಂದಿರಬೇಕು. ಮತ್ತು ಕಚ್ಚಿದ ಪ್ರಸಂಗದಲ್ಲಿ ಸರಕಾರದವರು ದವಾಖಾನೆಗಳಲ್ಲಿ ಮಾಡಿದ ವ್ಯವಸ್ಥೆಯ ಲಾಭವನ್ನು ಪಡೆಯಬೇಕು.




ಬೇರೆ ಬೇರೆ ಜಾತಿಯ ನಾಯಿಗಳು

ನಾಯಿಗಳಲ್ಲಿ ೧. ಬ್ಲಡ್ ಹೌಂಡ, ೨. ಜೂಲ ನಾಯಿ, ೩. ಕಾಕರ, ೪. ಸೆಟರ, ೫. ಮ್ಯಾಸ್ಟಿಫ್, ೬. ಫಾಕ್ಸ ಹೌಂಡ, ೭. ಮುಧೋಳ ನಾಯಿ, ೮. ಬುಲ್‌ಡಾಗ್, ೯. ಮೆಕ್ಕೆಯ ನಾಯಿ ಮುಂತಾದ ಅನೇಕ ಜಾತಿಯ ನಾಯಿಗಳಿರುತ್ತವೆ.

ನಾಯಿಯು ಬಹುತರವಾಗಿ ಹಗಲಿನ ವೇಳೆಯಲ್ಲಿಯೇ ನಿದ್ರಿಸಿ ರಾತ್ರಿಯಲ್ಲಿ ತನ್ನ ಒಡೆಯನ ಆಸ್ತಿಯನ್ನು ಕಾಯುವದಕ್ಕಾಗಿ ಎಚ್ಚರದಿಂದಿರುವದು. ಆಗ ಯಾರಾದರೂ ಹೊಸಬರು ಬಂದರೆ, ಅವರನ್ನು ಕಚ್ಚುವದು. ಇಲ್ಲವೆ ಬೊಗಳಿ ಬೊಗಳಿ ತನ್ನ ಯಜಮಾನನನ್ನು ಎಚ್ಚರಗೊಳಿಸುವದು.

ಕಳ್ಳಕಾಕರ ಅರಿವೆಯನ್ನು ಇದಕ್ಕೆ ಮೂಸಿಸಿದರೆ ಆ ವಾಸನೆಯಿಂದಲೇ ವೇಷ ಬದಲಾಯಿಸಿ ಜನಸಮೂಹದಲ್ಲಿದ್ದ ಅವರನ್ನು ಕಂಡು ಹಿಡಿಯುತ್ತದೆ. ತನ್ನನ್ನು ಪೀಡಿಸಿದವರ ಮೇಲೆ ಕುನುಸು ಇಡುವದು. ಹೀಗೆ ಅದು ತನ್ನನ್ನು ಸಾಕಿದವನ ಜೀವದ ಗೆಳೆಯನಾಗಿ ಬಾಳಿ ಸೇವೆಯನ್ನು ಸಲ್ಲಿಸುತ್ತದೆ.



ತೋಳ



ನರಿಗಳು

ಅಡವಿಯಲ್ಲಿ ಸಂಚರಿಸುವ ತೋಳ ಮತ್ತು ನರಿಗಳು ನಾಯಿಯ ಜಾತಿಗೆ ಸೇರಿದ ಪ್ರಾಣಿಗಳು.

# ಬೆಕ್ಕು



ಬೆಕ್ಕು

ಇದು ಮನುಷ್ಯನು ಸಾಕುತ್ತಿರುವ ಮಾಂಸಭಕ್ಷಕ ಪ್ರಾಣಿಗಳಲ್ಲಿ ಒಂದಾಗಿದೆ. ಇದು ಸಾಧಾರಣವಾಗಿ ಮನುಷ್ಯರ ವಸತಿ ಸ್ಥಾನಗಳಲ್ಲಿ ಇದ್ದೇ ಇರುವದು. ಇವುಗಳಲ್ಲಿ ಕರಿ, ಬಿಳಿ, ಹಂಡಬಂಡ ಮುಂತಾದ ಹಲವು ಬಣ್ಣದ ಬೆಕ್ಕುಗಳಿರುವವು. ಇದು ೯ ರಿಂದ ೧೨ ಇಂಚಿಗಿಂತ ಹೆಚ್ಚು ಎತ್ತರವಿರುವದಿಲ್ಲ. ಇದರ ಮುಖವು ದುಂಡಗಿರುತ್ತದೆ. ಕಣ್ಣುಗಳು ಹೊಳಪುಳ್ಳವು. ಕಿವಿಗಳು ದುಂಡಗಿದ್ದು ತುದಿಗೆ ಚೂಪಾಗಿರುವವು. ಅವು ಬಹಳ ತೀಕ್ಷ್ಣವಿರುವವು. ಮೋರೆಯ ಮೇಲೆ ಬಿರುಸಾದ ಉದ್ದ ಕೂದಲುಗಳಿರುತ್ತವೆ. ಅವಕ್ಕೆ ಮೀಸೆಯೆನ್ನುವರು. ಬೆಕ್ಕು ತನ್ನ ಮೀಸೆಗಳಿಂದ ತಾನು ಹಾಯುಲಿರುವ ಕಿಂಡಿಯ ಅಳತೆಯನ್ನು ನಿರ್ಧರಿಸುವುದು.



ಮುಂಗಾಲು



ಹಿಂಗಾಲು

ಇದರ ಮುಂಗಾಲುಗಳಿಗೆ ಐದರಂತೆ, ಹಿಂಗಾಲುಗಳಿಗೆ ನಾಲ್ಕರಂತೆ ಹದನವಾದ ಉಗುರುಗಳಿರುತ್ತವೆ. ಅವಕ್ಕೆ ಪಂಜರವೆನ್ನುತ್ತಾರೆ. ಅವು ಯಾವಾಗಲೂ ಚರ್ಮದ ಚೀಲಿಗಳಲ್ಲಿ ಅಡಗಿರುತ್ತವೆ. ಅವಶ್ಯವೆನಿಸಿದಾಗ ಮಾತ್ರ ಇದು ಅವುಗಳನ್ನು ಹೊರಗೆ ತೆಗೆಯಬಲ್ಲದು. ಇದರ ಹಿಂಗಾಲುಗಳು ಗಾಡಿ

## ಬೆಕ್ಕಿನ ಬಳಗ



ಸಿಂಹ



ಹುಲಿ



ಲೈಂಕ್ಸ ಎಂಬ ಕಾಡುಬೆಕ್ಕು.





ಜಾಗ್ವಾರ್ ಎಂಬ ಚಿರತೆ.



ಪೂಮ ಎಂಬ ಕಪ್ಪುಚಿರತೆ.



ಚಿರತೆ.

ಬೆಕ್ಕಿನ ಬಳಗ

ಯಂತೆ ಮೆತ್ತಗಿರುವವು. ಇದರ ಮೈಯು ಮೃದುವಾಗಿರುತ್ತದೆ. ಬಾಲವು ಉದ್ದವಾಗಿರುತ್ತದೆ. ಇವುಗಳಲ್ಲಿ ಪುನಗು ಬೆಕ್ಕು, ಮಂಟ (ಮಟ) ಬೆಕ್ಕು, ಮತ್ತು ಊರ ಬೆಕ್ಕು ಎಂದು ಬೇರೆ ಬೇರೆ ಪ್ರಕಾರಗಳಿವೆ. ಹುಲಿ, ಸಿಂಹ, ಚಿರ್ಚು ಮೊದಲಾದ ಪ್ರಾಣಿಗಳು ಇದೇ ವರ್ಗಕ್ಕೆ ಸೇರಿದವುಗಳಾಗಿವೆ.

ಬೆಕ್ಕು ಹಾಲು, ಮೊಸರು, ಬೆಣ್ಣೆ, ಮಾಂಸ ಇವುಗಳನ್ನು ಹೆಚ್ಚಾಗಿ ಪ್ರೀತಿಸುತ್ತದೆ. ಇವುಗಳನ್ನು ಹುಡುಕುವದಕ್ಕಾಗಿ ಯಾವಾಗಲೂ ಮನೆ ಮನೆ ತಿರುಗುತ್ತಿರುವುದು. ಅವು ದೊರೆಯದಾಗ ಅನ್ನ, ರೊಟ್ಟಿ, ಹುಳಿ ಹುಪ್ಪಡಿ ಮುಂತಾದವುಗಳನ್ನೂ ತಿನ್ನುವದು. ಇದರ ದೇಹರಚನೆ ಮತ್ತು ಅಂಗಾಲುಗಳು ಎತ್ತರದ ಮೇಲಿಟ್ಟ ಆಹಾರವನ್ನು ತೆಗೆದುಕೊಳ್ಳಲಿಕ್ಕೂ ಅಲ್ಲಿಂದ ಕೆಳಗೆ ಹಾರಲಿಕ್ಕೂ ಅನುಕೂಲವಾಗಿರುತ್ತವೆ. ಅದರಿಂದ ಇದು ತನ್ನ ಆಹಾರವನ್ನು ಅನಾಯಾಸವಾಗಿ ಹುಡುಕಿಕೊಳ್ಳಬಲ್ಲದು. ತನ್ನ ಪ್ರೀತಿಯ ಆಹಾರವಾದ ಇಲಿ, ಗುಬ್ಬಿ ಮುಂತಾದವುಗಳನ್ನು ಹಿಡಿಯುವದಕ್ಕೆ ಯಾವಾಗಲೂ ಜಪ್ಪಿಸಿ ಕುಳಿತು ಹಾರಿಕೆಗೆ ಸಿಗುವಂತೆ ತೋರಿದಾಗ ಟಣ್ಣನೆ ಹಾರಿ ತನ್ನ ಪಂಜರದಿಂದ ಅವುಗಳನ್ನು ಹಿಡಿಯುವದು. ಇದರ ಕಣ್ಣುಗಳಲ್ಲಿಯ ಕನೀನಿಕೆಗಳು ಹಗಲಿನಲ್ಲಿ ಸೀಳಿನಾಕಾರದವಿದ್ದು ರಾತ್ರಿಯಲ್ಲಿ ಹೆಚ್ಚು ವಿಸ್ತಾರವಾಗುವದರಿಂದ ಅವು ಸ್ಪಷ್ಟವಾಗಿ ಕಾಣುತ್ತವೆ. ಅದರಿಂದ ಅದು ತನ್ನ ಬೇಟೆಯಾದ ಇಲಿ ಮುಂತಾದವುಗಳನ್ನು ರಾತ್ರಿಯಲ್ಲಿಯೇ ಹೆಚ್ಚಾಗಿ ಹಿಡಿದು ಶಾಂತವಾದ ಸ್ಥಳಕ್ಕೆ ಒಯ್ದು ಹದನವಾದ ಹಲ್ಲುಗಳಿಂದ ಹರಿದು ನುಂಗಿಬಿಡು



ಮುಖ



ಹಗಲು ಕಣ್ಣು



ರಾತ್ರಿ ಕಣ್ಣು

ವದು. ಇದರ ನಾಲಗೆಯು ಮುಳ್ಳುಮುಳ್ಳಾಗಿರುವದರಿಂದ ಎಲುಬಿಗೆ ಹತ್ತಿದ ಮಾಂಸವನ್ನು ಸಹ ನೆಕ್ಕಿ ತೆಗೆಯಬಲ್ಲದು. ಹಾಲು ಕುಡಿಯುವಾಗ ನಾಲಿಗೆಯು ಚಮಚೆಯಂತೆ ಉಪಯೋಗವಾಗುವದು.

ಬೆಕ್ಕು ವರ್ಷದಲ್ಲಿ ಎರಡು ಸಾರಿ ಈಯುತ್ತದೆ. ಸರತಿಗೆ ೩–೪ ಮರಿಗಳು ಹುಟ್ಟುವವು. ಹುಟ್ಟಿದ ೯ ದಿನಗಳಿಗೆ ಅವುಗಳ ಮುಚ್ಚಿದ ಕಣ್ಣುಗಳು ತೆರೆಯುವವು. ಮರಿಗಳು ಚಿಕ್ಕವಿರುವಾಗ ಗಂಡು ಬೆಕ್ಕುಗಳು (ಬಾವುಗಗಳು) ಅವುಗಳನ್ನು ಕಂಡರೆ ಕೊಂದುಹಾಕುವವು. ಆದಕ್ಕಾಗಿ ಹೆಣ್ಣುಬೆಕ್ಕು ತನ್ನ ಮರಿಗಳನ್ನು ಒಂದೇ ಸ್ಥಳದಲ್ಲಿ ಇಡದೆ, ಬೇರೆ ಬೇರೆ ಗುಪ್ತ ಸ್ಥಳಗಳಿಗೆ ಒಯ್ಯುತ್ತಿರುವದು. ಅವು ದೊಡ್ಡವಾದಂತೆ ಮಾಂಸವನ್ನು ತಿನ್ನಲು, ಬೇಟೆಯಾಡಲು ಮತ್ತು ಚಿನ್ನಾಟವಾಡಲು ಕಲಿಸುವದು.

ಇಲಿಗಳ ಉಪದ್ರವವನ್ನು ಕಳೆಯಲು ಇದನ್ನು ಬಹು ಜನರು ಸಾಕುತ್ತಾರೆ. ಆದರೆ ಇದು ನಾಯಿಯಷ್ಟು ನಂಬಿಗೆಯದಲ್ಲ. ಸಂಕಟಕಾಲದಲ್ಲಿ ತನ್ನನ್ನು ಸಾಕಿದವರನ್ನು ಸಹ ಪಂಜದಿಂದ ಹರಿಯುವದು. ಇದು ಬೆಚ್ಚಗಿನ ಸ್ಥಳದಲ್ಲಿ ಅಂದರೆ ಮನುಷ್ಯರ ಹಾಸುಗೆಯಲ್ಲಿ ಅಥವಾ ಒಲೆಯ ಬದಿಯಲ್ಲಿ ಮಲಗುವದು. ಇದು ತನ್ನ ಮೈಯನ್ನು ನೆಕ್ಕಿ ಯಾವಾಗಲೂ ಸ್ವಚ್ಛವಾಗಿಟ್ಟುಕೊಳ್ಳುವದು. ಮೋರೆಯನ್ನು ಉಗುಳು ಹತ್ತಿದ ಮುಂಗಾಲಿನಿಂದ ಒರೆಸಿಕೊಳ್ಳುವದು. ಕಸ–ಕಡ್ಡಿ, ಬೂದಿ, ಮಣ್ಣು ಮೊದಲಾದವುಗಳಲ್ಲಿ ಮಲಮೂತ್ರಗಳನ್ನು ಮಾಡಿ ಮುಚ್ಚುವದು. (ಪ್ರಸಂಗ ಬಂದಾಗ ಇದು ತನ್ನ ಉಗುರುಗಳ ಸಹಾಯದಿಂದ ಗಿಡವನ್ನು ಏರಬಲ್ಲದು.) ಇದು ಸಾಧಾರಣ ಹತ್ತು ವರುಷ ಬಾಳುವದು.



ಮೋರೆ ಒರೆಸಿಕೊಳ್ಳುವದು

ಬೆಕ್ಕು ಮನುಷ್ಯರಿಗೆ ಕೆಲಮಟ್ಟಿಗೆ ಮಾತ್ರ ಉಪಯೋಗವಾಗುತ್ತಿದ್ದರೂ ಅವರು ತೋರಿಸುವ ಮಮತೆಯಿಂದ ಇದು ಅವರ ಸಹವಾಸದಲ್ಲಿ ಸುಖದಿಂದ ಬಾಳುವದು.

## ಅಭ್ಯಸನಗಳು

(೧) ನಾಯಿ ಮತ್ತು ಬೆಕ್ಕುಗಳ ಕಾಲುಗಳಲ್ಲಿಯ ಅಂತರವೇನು ?

(೨) ಬೇಟೆಯ ನಾಯಿಯ ಲಕ್ಷಣಗಳಾವವು ?

(೩) ನಾಯಿಯು ಕಚ್ಚುವದು ಅಥವಾ ಪ್ರೀತಿಸುವದು ಎಂಬುದನ್ನು ಯಾವ ಲಕ್ಷಣಗಳಿಂದ ಕಂಡುಹಿಡಿಯುವಿರಿ ?

(೪) ಬೆಕ್ಕು ಅಷ್ಟೊಂದು ನಂಬುಗೆಯ ಪ್ರಾಣಿಯಲ್ಲವೆಂಬುದನ್ನು ನಿಮ್ಮ ಅನುಭವದ ಸಂಗತಿಗಳಿಂದ ಹೇಳಿರಿ.

(೫) ಕೆಳಗಿನವುಗಳಿಗೆ ಕಾರಣ ಕೊಡಿರಿ:—

(ಅ) ಹೆಣ್ಣು ಬೆಕ್ಕು ತನ್ನ ಚಿಕ್ಕ ಮರಿಗಳನ್ನು ಆಗಾಗ್ಗೆ ಬೇರೆ ಬೇರೆ ಸ್ಥಳಗಳಲ್ಲಿ ಇಡುತ್ತದೆ.

(ಆ) ಬೆಕ್ಕು ಬೇಟೆಯನ್ನು ರಾತ್ರಿಯಲ್ಲಿಯೇ ಹೆಚ್ಚಾಗಿ ಹಿಡಿಯುವದು.

(ಇ) ನಾಯಿಯು ಹಗಲಿನಲ್ಲಿ ಹೆಚ್ಚಾಗಿ ಮಲಗಿಕೊಂಡೇ ಇರುವದು.

# ಕೋಳಿ



ಮನುಷ್ಯನು ಮಾಡುವ ಲಾಭದಾಯಕ ವ್ಯವಸಾಯಗಳಲ್ಲಿ ಕೋಳಿಯನ್ನು ಸಾಕುವದೂ ಒಂದಾಗಿದೆ. ಕೋಳಿಯು ಪಕ್ಷಿಗಳ ವರ್ಗಕ್ಕೆ ಸೇರಿದುದು. ಆದರೂ, ಮೈಯು ಭಾರವಿದ್ದು, ಪಕ್ಕಗಳು ಸಣ್ಣವಿರುವದರಿಂದ ವಿಶೇಷ ದೂರ ಹಾಗೂ ಎತ್ತರ ಹಾರಲಾರದು. ಹೆಣ್ಣು ಕೋಳಿಗೆ ಹೇಟೆಯೆಂದೂ ಗಂಡು ಕೋಳಿಗೆ ಹುಂಜನೆಂದೂ ಅನ್ನುವರು. ಹುಂಜವು ಹೇಟೆಗಿಂತ ದೊಡ್ಡದೂ ಸುಂದರವಾದದ್ದೂ ಇರುತ್ತದೆ. ಇದರ ತಲೆಯ ಮೇಲೆ ಕೆಂಪು ತುರಾಯಿ, ಹಿಂಭಾಗದಲ್ಲಿ ಬಾಗಿದ ಉದ್ದ ಗರಿಗಳು ಇರುವವು. ಕೋಳಿಗೆ ಎರಡು ಕಾಲುಗಳಿದ್ದು ಅವುಗಳಿಗೆ ಮುಂದೆ ಮೂರು ಹಿಂದೆ ಒಂದು ಬೆರಳುಗಳಿರುತ್ತವೆ. ಬೆರಳುಗಳ ತುದಿಗೆ ಹದವಾದ ಉಗುರುಗಳಿರುತ್ತವೆ. ಇದರ ಕಣ್ಣುಗಳು ತೀಕ್ಷ್ಣವಾಗಿದ್ದು ಅವುಗಳ ರೆಪ್ಪೆಗಳು ಉಳಿದ ಪ್ರಾಣಿಗಳ ರೆಪ್ಪೆಗಳಂತಿರದೆ ಕೆಳಗಿನಿಂದ ಮೇಲಕ್ಕೇರಿ ಕಣ್ಣುಗಳನ್ನು ಮುಚ್ಚುವವು. ಇದರ ಬಾಯಿಗೆ ಬಿರುಸಾದ ಚುಂಚು ಇರುತ್ತದೆ.

ಇದು ಹುಳ ಹುಪ್ಪಡಿ, ಕಾಳುಕಡಿ, ಮುಸುರೆ, ಸಣ್ಣ ಹರಳು, ಸಿಂಪು ಮೊದಲಾದವುಗಳನ್ನು ತಿಂದು ಬದುಕುವದು. ಇದು ತನ್ನ ಉಗುರುಗಳಿಂದ ಕಸದ ಗುಂಪು, ರಗಣೆ ಮುಂತಾದವುಗಳನ್ನು ಕೆದರಿ ಅವುಗಳೊಳಗಿನ ಕಾಳು, ಹುಳಗಳನ್ನು ಆರಿಸಿ ತಿನ್ನುವದು. ಕೆದರುವಾಗ ತಿಪ್ಪೆಗಳಿಂದ ಎಷ್ಟು

ಧೂಳು ಕಣ್ಣುಗಳಲ್ಲಿ ಬೀಳದಂತೆ ರೆಪ್ಪೆಗಳು ಕಣ್ಣುಗಳನ್ನು ರಕ್ಷಿಸುತ್ತವೆ. ಇವಕ್ಕೆ ಹಲ್ಲುಗಳಿಲ್ಲದ್ದರಿಂದ ಆಹಾರವನ್ನು ನುರಿಸದೆ ನುಂಗಿಬಿಡುವವು. ಚುಂಚಿನಿಂದ ನೀರನ್ನು ತಕ್ಕೊಂಡು ಮೇಲೆ ಮುಖಮಾಡಿ ನುಂಗುವವು.

ಹೇಟೆಯು ದಿನಾಲು ಒಂದರಂತೆ ೧೫ ದಿನಗಳ ವರೆಗೆ ತತ್ತಿಗಳನ್ನು ಇಡುವದು. ತತ್ತಿಗಳು ಒಂದು ಪ್ರಕಾರದ ಹಳದಿಯ ರಸದಿಂದ ತುಂಬಿರುವವು. ಅವುಗಳ ಕವಚವು ಬೆಳ್ಳಗಿರುವದು. ಇವುಗಳಿಗೆ ಹೇಟೆಯು ಪ್ರತಿ ದಿನ ಕೊಡುವ ಕಾವಿನಿಂದ ೨೧ ದಿನಗಳಾದ ಮೇಲೆ ಒಡೆದು ಮರಿಗಳು ಹೊರಬೀಳುವವು. ತತ್ತಿಗಳಿಗೆ ಯಂತ್ರದಿಂದ ಕಾವನ್ನು ಪ್ರಾಪ್ತಿಸಿ ಮರಿಗಳನ್ನು ಮಾಡುವ ಪದ್ಧತಿಯೂ ಒಳಕೆಯಲ್ಲಿ ಬಂದಿದೆ. ತಾಯಿಯು ಮರಿಗಳನ್ನು ಬೆನ್ನು ಹಚ್ಚಿಕೊಂಡು ಮೇಯುವದನ್ನು ಕಲಿಸುವದು. ಅವುಗಳನ್ನು ಹದ್ದು, ನಾಯಿ ಮೊದಲಾದವುಗಳು ಅಪಹರಿಸದಂತೆ ಎಚ್ಚರವಿಂದಿರುವದು. ಸಂಕಟ ಸಮಯದಲ್ಲಿ ಒಂದು ವಿಚಿತ್ರ ರೀತಿಯಲ್ಲಿ ಒದರುವದು. ಅಂಥ ಪ್ರಸಂಗದಲ್ಲಿ ಮರಿಗಳ ಸಲುವಾಗಿ ತನ್ನ ಜೀವಕ್ಕೆ ಸಹ ಎರವಾಗುವದು. ಎರಡು ಹುಂಜಗಳು ಕೂಡಿದರೆ ಕಾಲಿನ ಉಗುರುಗಳಿಂದ ಕಾದಾಡುವವು. ಆಗ ಅವು ಮೇಲಕ್ಕೆ ಹಾರಿ ಹಾರಿ, ಒಂದು ಇನ್ನೊಂದರ ತಲೆಯನ್ನು ಹರಿಯಲು ಪ್ರಯತ್ನಿಸುವವು. ಆದ್ದರಿಂದ ಇವಕ್ಕೆ 'ಚರಣಾಯುಧ' ವೆಂದು ಹೆಸರು ಕೊಟ್ಟಿರುತ್ತಾರೆ.

ಹುಂಜವು ರಾತ್ರಿಯ ಕಡೆಯ ಪ್ರಹರದಲ್ಲಿ ಅಂದರೆ ಬೆಳಗಿನ ೪ ಗಂಟೆಯ ಸುಮಾರಕ್ಕೆ ತಪ್ಪದೆ ಕೂಗುವದು. ಇದರಿಂದ ಬೆಳಗು ಬಂತೆಂದು ತಮ್ಮ ಕೆಲಸದಲ್ಲಿ ತೊಡಗಲು ಒಕ್ಕಲಿಗರಿಗೆ ಅನುಕೂಲವಾಗುವದು.

ಕೋಳಿಯ ತತ್ತಿಯು ಪೌಷ್ಟಿಕವಾದದ್ದೆಂದು ಅನೇಕರು ಸೇವಿಸುತ್ತಿರುವರು. ಬೇನೆಯಿಂದೆದ್ದವರಿಗೆ ಶಕ್ತಿವರ್ಧಕವೆಂದು ಇದನ್ನು ಕೊಡುವರು. ಕೋಳಿಯ ಮಾಂಸವು ಮಾಂಸಾಹಾರಿಗಳ ಆಹಾರವಾಗಿದೆ. ಕೋಳಿಯು ಆಹಾರದ ವಿಷಯದಲ್ಲಿ ಮಹತ್ವದ್ದಾದುದರಿಂದಲೂ ಮತ್ತು ಇವನ್ನು ಸಾಕಲು ವಿಶೇಷ ಖರ್ಚು ಬಾರದಿರುವದರಿಂದಲೂ ಕೋಳಿಗಳನ್ನು ಸಾಕುವದು ಇತ್ತೀಚೆಗೆ ಹೆಚ್ಚು ಬಳಕೆಯಲ್ಲಿ ಬಂದಿದೆ. ಗ್ರಾಮ ಸುಧಾರಣಾ ಸಂಘದವರು ಪ್ರತಿಯೊಂದು ಹಳ್ಳಿಯಲ್ಲಿ ಲೆಗ್‌ಹಾರ್ನ್, ಟರ್ಕಿಯ ಕೋಳಿ

ಇವುಗಳಲ್ಲಿ ಪ್ರತಿಯೊಂದು ಪ್ರಕಾರದ ಬೆಳೆಗೆ ಅವಶ್ಯವಿರುವ ಮಳೆ, ಹವಾಮಾನ, ಭೂಮಿಗಳು ಬೇರೆ ಬೇರೆಯಾಗಿರುವವು. ಭೂಮಿಯು ಎಲ್ಲ ಭಾಗಗಳಲ್ಲಿಯೂ ಒಂದೇ ತರಹದ್ದಿರುವದಿಲ್ಲ. ಆದರಲ್ಲಿಯೂ ನಾವು ಅನು ಕೂಲತೆಗಾಗಿ ಭಾಗಗಳನ್ನು ಮಾಡಬಹುದು.

೧. ಎರೆಭೂಮಿ—ಇದರಲ್ಲಿಯ ಮಣ್ಣು ಕರಿ ಬಣ್ಣದ್ದು ಇರುತ್ತದೆ. ಇದರಲ್ಲಿ ಸಣ್ಣ ಎರೆಯ ಭೂಮಿ, ಕರಲ ( ಗಂಟು ಎರೆಯು ) ಭೂಮಿ ಎಂದು ಎರಡು ಬಗೆಯಿವೆ.

ಸಣ್ಣ ಎರೆಯ ಭೂಮಿಯ ಮಣ್ಣಿನ ಕಣಗಳು ಚಿನಗು ಇದ್ದು ಮೃದುವಾಗಿರುತ್ತವೆ. ನೆಲವು ಮಳೆಯ ನೀರನ್ನು ತೀವ್ರ ಹೀರಿಕೊಳ್ಳುತ್ತದೆ. ಕರಲು ಭೂಮಿಯ ಮಣ್ಣಿನ ಕಣಗಳು ಉರುಟು ಇದ್ದು ಬಿರುಸು ಇರುತ್ತವೆ. ಇದು ಮಳೆಯ ನೀರನ್ನು ತೀವ್ರ ಹೀರಿಕೊಳ್ಳುವದಿಲ್ಲ. ಆದರಿಂದ ಇಂಥ ಭೂಮಿಯು ಪೂರ್ಣ ಹಸಿಯಾಗಲು ಮೇಲಿಂದ ಮೇಲೆ ಮಳೆಯಾಗುತ್ತಿರ ಬೇಕು. ಎರಡೂ ಭೂಮಿಗಳು ಒಮ್ಮೆ ಆದ ಹಸಿಯನ್ನು ತೀವ್ರ ಆರ ಗೊಡುವದಿಲ್ಲ. ಈ ಮಣ್ಣು ಭೂಮಿಯಲ್ಲಿ ಹೆಚ್ಚು ಆಳವಾಗಿರುತ್ತದೆ.

೨. ಮಸಾರಿ ಭೂಮಿ—ಇದು ಗುಡ್ಡದ ಮೇಲ್ಭಾಗವು ಸವೆದು ಅಲ್ಲಿಂದ ಹರಿದು ಬಂದ ಮಣ್ಣಿನಿಂದ ಆದ ಭೂಮಿಯು. ಮೇಲ್ಭಾಗದಲ್ಲಿ ಮೆತ್ತನ್ನ ಮತ್ತು ಸಚ್ಛಿದ್ರ ಥರಗಳಿದ್ದು ಕೆಳಭಾಗದಲ್ಲಿ ಗರಸಿನ ಥರಗಳಿರುತ್ತವೆ. ಮೃದುವಾದ ಮಣ್ಣಿನ ಭಾಗವು ಬಹಳ ಆಳದ ವರೆಗೆ ಇರುವದಿಲ್ಲ. ಇದ ರಲ್ಲಿಯ ಮಣ್ಣಿನ ಬಣ್ಣವು ನಸುಗೆಂಪು. ಇಂಥ ಭೂಮಿಗೆ ಮಳೆಯು ಮೇ- ಲಿಂದ ಮೇಲೆ ಬೇಕಾಗುವದು.

೩. ರೇವೆ— ನದಿ ಅಥವಾ ಹಳ್ಳಗಳು ಪ್ರವಾಹಗಳೊಡನೆ ತಂದು ದಂಡೆಗಳಲ್ಲಿ ಬಿಡಲ್ಪಟ್ಟ ಮಣ್ಣು ಜಿಗುಟಾಗಿದ್ದು ಫಲವತ್ತಾದದ್ದಿರುತ್ತದೆ. ಇದರಲ್ಲಿ ಗೊಬ್ಬರದ ಪ್ರಮಾಣವು ಹೆಚ್ಚಿರುತ್ತದೆ.

೪. ಬಡ ಹಕ್ಕಲ ಭೂಮಿ— ಇದರಲ್ಲಿ ಮಣ್ಣಿನ ಥರವು ಬಹಳ ತೆಳು ವಾಗಿರುತ್ತದೆ. ಮತ್ತು ಪೋಷಕ ದ್ರವ್ಯಗಳು ತೀರ ಕಡಿಮೆ ಪ್ರಮಾಣದಲ್ಲಿ ಇರುತ್ತವೆ.

ಇನ್ನು ಪ್ರತಿಯೊಂದು ಬೆಳೆಗೆ ಅವಶ್ಯವಿರುವ ಭೂಮಿ, ಮಳೆ ಹವಾ ಮಾನಗಳನ್ನು ತಿಳಿದುಕೊಳ್ಳುವದು ಅಗತ್ಯವಾಗಿದೆ.

# (೧) ತೃಣಧಾನ್ಯಗಳು

## ಜೋಳ

ಜೋಳವು ಮುಖ್ಯ ಆಹಾರ ಧಾನ್ಯಗಳಲ್ಲಿ ಒಂದಾಗಿದೆ. ಇದು ಧಾರವಾಡ, ಬೆಳಗಾವಿ ಜಿಲ್ಲೆಗಳ ಕೆಲವೊಂದು ಭಾಗ, ವಿಜಾಪೂರ, ಸೊಲ್ಲಾಪೂರ, ಅಹಮ್ಮದನಗರ ಮತ್ತು ಸಾತಾರೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಇವರಲ್ಲಿ ಮುಂಗಾರಿಯ ಜೋಳ (ಕೆಂಜೋಳ), ಹಿಂಗಾರಿಯ ಜೋಳ (ಬಿಳಿ ಜೋಳ) ಎಂದು ಮುಖ್ಯವಾದ ಎರಡು ಪ್ರಕಾರಗಳಿರುತ್ತವೆ. ಅಲ್ಲದೆ ಕೆಂಜೋಳದಲ್ಲಿ ಗಿಡಜೋಳ, ಮರಜೋಳ ಎಂದೂ ಮರ ಜೋಳದಲ್ಲಿ ಗಟ್ಟಿಬೀಜದ ಜೋಳ, ನಂದ್ಯಾಲ ಜೋಳಗಳೆಂದೂ ಒಳಭೇದಗಳುಂಟು.



ಜೋಳ

**ಮುಂಗಾರಿಯ ಜೋಳ**– ಇದು ಮುಂಗಾರಿಯ ಬೆಳೆಯು. ಇದು ಹೆಚ್ಚು ಕಡಿಮೆ ಪ್ರಮಾಣದಿಂದ ಬಹುತರ ಎಲ್ಲ ನೆಲಗಳಲ್ಲಿಯೂ ಬೆಳೆಯುತ್ತದೆ. ಇದನ್ನು ಬಿತ್ತುವ ಮೊದಲು ೭-೮ ಕುಂಟೆಗಳನ್ನು ಹೊಡೆದು ಭೂಮಿಯನ್ನು ಮಿದುವು ಮಾಡುವರು. ಆಮೇಲೆ ಗೊಬ್ಬರ ಹರವಿ ಹದಗೊಳಿಸುವರು. ಮುಂಗಾರಿಯ ಒಂದೆರಡು ಮಳೆಗಳು ಬಿದ್ದು ಭೂಮಿಯು ಸಾಕಷ್ಟು ಹಸಿಯಾಯಿತೆಂದರೆ ಬಿತ್ತಲಿಕ್ಕೆ ಆರಂಭಿಸುವರು. ಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ಜೂನ, ಜುಲೈ ತಿಂಗಳಲ್ಲಿ ಅಂದರೆ ಪುನರ್ವಸು, ಪುಷ್ಯ ಮಳೆಗಳಲ್ಲಿ ಜೋಳವನ್ನು ಬಿತ್ತುವರು. ಕೆಲವೆಡೆಗೆ ಇದಕ್ಕೂ ಮೊದಲು ಬಿತ್ತುವದೂ ಉಂಟು.

ಹಿಂದಿನ ಸುಗ್ಗಿಯಲ್ಲಿ ಉತ್ತಮ ತೆನೆಗಳನ್ನು ಆರಿಸಿ. ಬಡಿದ ಕಾಳು ಗಳನ್ನು ಬಿತ್ತುವದಕ್ಕಾಗಿಯೇ ಇಟ್ಟಿರುತ್ತಾರೆ. ಅವುಗಳಿಗೆ ಹುಳ ಹತ್ತ ದಂತೆ ಬಹಳ ಎಚ್ಚರಪಡಬೇಕಾಗುತ್ತದೆ. ಅಂಥ ಬೀಜಗಳನ್ನು ಬಿತ್ತುವ ಕಾಲದಲ್ಲಿ ತುತ್ತಿಯ ನೀರಿನಲ್ಲಿ ತೋಯಿಸಿ, ಒಣಗಿಸಿ ಬಿತ್ತಲು ಉಪಯೋಗಿ ಸುತ್ತಾರೆ. ಜೋಳವನ್ನು ಮೂರು ಅಥವಾ ನಾಲ್ಕು ತಾಳುಗಳ ಕೂರಿಗೆ ಯಿಂದ ಬಿತ್ತುತ್ತಾರೆ. ಅದನ್ನು ಬಿತ್ತುವಾಗ ಮೂರನೆಯ ಸಾಲಿಗೆ ಹೆಸರು ಅಥವಾ ಮಡಿಕೆಯನ್ನು ಆರನೆಯ ಸಾಲಿಗೆ ತೊಗರಿಯನ್ನು ಎಳೆಸೆಡ್ಡಿಗಳಿಂದ ಹಾಕಿಸುವರು. ಇದಕ್ಕೆ ಅಕ್ಕಡಿ ಹಾಕೋಣವೆನ್ನುವರು. ಎರಡು ತೊಗರಿ ಯ ಸಾಲು ಅಥವಾ ಎರಡು ಮಡಕೆಯ ಸಾಲುಗಳ ಮಧ್ಯದಲ್ಲಿ ನಾಲ್ಕು ವೊಳ ಅಂದರೆ ಒಂದು ಅಕ್ಕಡಿ ಅಂತರವಿರುವದರಿಂದ ಈ ಕಾಳುಗಳಿಗೆ ಅಕ್ಕಡಿಯ ಕಾಳು ಎಂಬ ಹೆಸರು ಬಿದ್ದಿದೆ. ಈ ಅಕ್ಕಡಿ ಬೆಳೆಗಳು ಜೋಳದ ಬೆಳೆಗೆ ಯಾವ ಪ್ರಕಾರದ ತೊಂದರೆಯನ್ನುಂಟು ಮಾಡದೆ ಸ್ವತಂತ್ರವಾಗಿ ಬೆಳೆಯುವವು.

ಜೋಳವು ಬಿತ್ತಿದ ಏಳು ದಿವಸಕ್ಕೆ ಕಾಣುವದು. ಬಿತ್ತಿದ ಮೇಲೆ ಸುಮಾರು ಒಂದು ತಿಂಗಳೊಳಗಾಗಿ ಅಂದರೆ ಸಸಿಯು ಒಂದು ಜೋಟು, ಗೇಣು ಎತ್ತರವಾದ ಮೇಲೆ ಎಡೆಹೊಡೆಯುವರು. ಇದರಿಂದ ಎರಡು ಸಾಲುಗಳ ನಡುವಿನ ಕಸವು ಹೋಗುವದಲ್ಲದೆ ಜೋಳದ ಸಸಿಗಳ ಸಾಲಿಗೆ ಮಣ್ಣು ಏರಿ ಅವು ಭದ್ರವಾಗುವವು.

ಆಗ ಮಳೆಯ ಸೆಳಕುಗಳು ಮೇಲಿಂದ ಮೇಲೆ ಆಗುತ್ತಿರುವದರಿಂದ ಅದು ಬೆಳೆದು ಮುಂದೆ ತಿಂಗಳೊಪ್ಪತ್ತಿನಲ್ಲಿ ಹೊಡೆಹಾಯುವದು. ಆಮೇಲೆ ಹೊಡೆ ಬಿಚ್ಚಿ, ತೆನೆಗಳಲ್ಲಿ ಹಾಲುದುಂಬಿ ಕಾಳುಗಳಾಗುವವು. ಈ ಹಸಿ ಜೋಳದ ಕಾಳುಗಳಿಗೆ ಬೆಳಸಿಗಳೆನ್ನುತ್ತಾರೆ. ಅವು ಮುಂದೆ ಮೂಡಗಾಳಿ ಯಿಂದ ಒಣಗಿ ಜೋಳದ ಕಾಳುಗಳಾಗುವವು. ಇದು ೪ ತಿಂಗಳ ಪೈರಾ ದುದರಿಂದ ಡಿಶೆಂಬರ ತಿಂಗಳ ಕೊನೆಗೆ ಪೂರ್ಣ ಒಣಗುವದು. ಆಗ ಅದನ್ನು ಕೊಯ್ದು ತೆನೆಗಳನ್ನು ಕೊಯಿಸಿ ರಾಶಿ ಮಾಡುವರು. ಇದರ ಸೊಪ್ಪೆಯು ದನಗಳ ಆಹಾರಕ್ಕಾಗಿ ಉಪಯೋಗಿಸಲ್ಪಡುವದು.

**ಹಿಂಗಾರಿಯ ಜೋಳ:**— ಚಳಿಗಾಲದ ಪೈರು. ಕೆಲವೊಂದು ವಿಶಿಷ್ಟತರದ ಭೂಮಿಯಲ್ಲಿ ಮಾತ್ರ ಇದು ಬೆಳೆಯುತ್ತದೆ. ಅದಕ್ಕೆ ಹೆಚ್ಚಾಗಿ ಜಿನುಗು ಮಣ್ಣಿನ ಎರೆಭೂಮಿಯು ಬೇಕಾಗುತ್ತದೆ. ಈ ಜೋಳವು ಬಿಳಿಯ ಬಣ್ಣದ್ದಿದ್ದು ಗಟ್ಟಿಯಿರುತ್ತದೆ. ಆದ್ದರಿಂದ ಇದಕ್ಕೆ ಬಿಳಿಜೋಳ ಅಥವಾ ಎಣಿಗರ ಜೋಳವೆಂದೂ ಕರೆಯುವರು. ಇದನ್ನು ಅಕ್ಟೋಬರ, ನವ್ಹಂಬರ ತಿಂಗಳುಗಳಲ್ಲಿ ಅಂದರೆ ಸ್ವಾತೀಮಳೆಯಲ್ಲಿ ಬಿತ್ತುವರು. ಮುಂಗಾರಿ ಜೋಳದಲ್ಲಿ ಹೆಸರು, ತೊಗರಿಗಳನ್ನು ಅಕ್ಕಡಿ ಹಾಕಿದಂತೆ ಈ ಹಿಂಗಾರಿ ಜೋಳದಲ್ಲಿ ಅಗಸೆ, ಕಡಲೆಗಳನ್ನು ಅಕ್ಕಡಿಯಾಗಿ ಹಾಕುವರು. ಇದನ್ನು ಬಿತ್ತುವ ಕಾಲದಲ್ಲಿ ಭೂಮಿಯು ಸಂಪೂರ್ಣ ತಳಹಸಿಯಿರುವದರಿಂದ ಮುಂಗಾರಿಯ ಜೋಳಕ್ಕೆ ಬೇಕಾಗುವಂತೆ ಇದಕ್ಕೆ ಮುಂದೆ ಮಳೆಯು ಬೇಕಾಗುವದಿಲ್ಲ. ಇದು ಉಳಿದೆಲ್ಲ ರೀತಿಯಲ್ಲಿ ಮುಂಗಾರಿಯ ಜೋಳವನ್ನು ಹೋಲುತ್ತಿದ್ದರೂ ಇದರ ಬೆಳೆಯ ಪ್ರಮಾಣವು ಅದಕ್ಕಿಂತ ತುಸು ಕಡಿಮೆಯಾದದ್ದಿರುತ್ತದೆ. ಅಂದರೆ ಮುಂಗಾರಿ ಜೋಳದ ಬೆಳೆ ಎಕರೆಗೆ ೮ ಚೀಲಗಳಾದರೆ ಬಿಳಿಜೋಳದ ಬೆಳೆ ೫ ಚೀಲ ಬರುತ್ತದೆ.

### ಅಭ್ಯಸನಗಳು

(೧) ಜೋಳದ ಬೀಜಗಳನ್ನು ಹೇಗೆ ತಯಾರಿಸುವರು ?
(೨) ಮುಂಗಾರಿ ಮತ್ತು ಹಿಂಗಾರಿಯ ಜೋಳಗಳಲ್ಲಿಯ ಭೇದವೇನು ?
(೩) ಇವುಗಳನ್ನು ಬಿತ್ತುವ ಮತ್ತು ಒಕ್ಕುವ ಕಾಲಗಳಾವವು ?
(೪) ಅಕ್ಕಡಿಕಾಳುಗಳೆಂದರೆ ಯಾವವು ? ಅವುಗಳಿಗೆ ಆ ಹೆಸರು ಬರಲು ಕಾರಣವೇನು ?
(೫) ಹಿಂಗಾರಿಯ ಜೋಳವು ಎಂಥ ಪ್ರದೇಶದಲ್ಲಿ ವಿಶೇಷವಾಗಿ ಬೆಳೆಯುತ್ತದೆ?

---

## ಬತ್ತ

ಬತ್ತವು ಜೋಳದಂತೆ ಮುಂಗಾರಿಯ ಬೆಳೆಯಾಗಿದ್ದು ಶ್ರೇಷ್ಠಧಾನ್ಯಗಳಲ್ಲೊಂದಾಗಿದೆ.

ಅಕ್ಕಿಯ ಗುಣಧರ್ಮದ ಮೇಲಿಂದ ಬತ್ತದಲ್ಲಿ ದೊಡ್ಡ ಬತ್ತ, ಸಣ್ಣ ಬತ್ತ, ಅಂಬೆಮೋರಿ ಬತ್ತ, ಗಿರೆಸಾಳಿ ಮುಂತಾದ ಅನೇಕ ಪ್ರಕಾರಗಳನ್ನು ಕಲ್ಪಿಸಿದ್ದಾರೆ. ಈ ಬೆಳೆಗೆ ರೇವೆಮಣ್ಣಿನ ಭೂಮಿ, ಕೆಂಪು ಭೂಮಿ ಇಲ್ಲವೆ ಕೆಂಪು

ಮಿಶ್ರಿತ ಕಪ್ಪು ಭೂಮಿ ಇವು ಬೇಕು. ಭೂಮಿಯಲ್ಲಿ ನೀರು ಬಸಿಯುವಂತಿರ ಬೇಕು. ಆರ್ದ್ರತೆಯಿಂದ ಕೂಡಿದ ಉಷ್ಣ ಹವೆ ಹಾಗೂ ಕನಿಷ್ಟ ೫೦ ಇಂಚಿನಷ್ಟು ಮಳೆ ಬೇಕು. ಭೂಮಿ ಹಾಗೂ ಹವೆಯ ಅನುಕೂಲತೆಗಳಿದ್ದು ಮಳೆಯು ಮಾತ್ರ ಮೇಲೆ ಹೇಳಿದಷ್ಟು ಆಗುವಂತಿರದಿದ್ದರೆ ಅಂಥ ಪ್ರದೇಶಗಳಲ್ಲಿ ಕೆರೆ, ಕಾಲುವೆಗಳಿಂದ ನೀರು ಪೂರೈಸಿಕೊಂಡು ಬತ್ತವನ್ನು ಬೆಳೆಯ ಬಹುದು.



ಬತ್ತ

ಬತ್ತವನ್ನು ಬಿತ್ತುವ ಮೊದಲೇ ಭೂಮಿಯನ್ನು ರಂಟೆ, ಕುಂಟೆಗಳನ್ನು ಹೊಡೆದು ಗೊಬ್ಬರ ಹಾಕಿ ಹದಮಾಡುತ್ತಾರೆ. ಮೇ ತಿಂಗಳ ಕೊನೆಗೆ ಅಥವಾ ಜೂನ ಪ್ರಾರಂಭಕ್ಕೆ ಅಂದರೆ ಭರಣಿ, ಕೃತಿಕಾ, ರೋಹಿಣಿ ಮಳೆಗಳಲ್ಲಿ ಇದನ್ನು ಬಿತ್ತುವರು. ಸಕಾಲಕ್ಕೆ ಮಳೆಯಾಗದಿದ್ದರೆ ಒಣಮಣ್ಣಿನಲ್ಲಿಯೂ ಬಿತ್ತುವದುಂಟು. ಮುಂದೆ ಮಳೆಯಾಗಿ ಹಸಿಯಾದಾಗ ಬತ್ತವು ನಾಟುವದು. ಬತ್ತವನ್ನು (ಅ) ಕೈಯಿಂದ ಉಗ್ಗುವದು (ಬ) ಕೂರಿಗೆಯಿಂದ ಬಿತ್ತುವದು ಹಾಗೂ (ಕ) ನಟಿ ಹಚ್ಚುವದು ಹೀಗೆ ಮೂರು ರೀತಿಗಳಿಂದ ಬಿತ್ತುವರು. ನಟಿ ಹಚ್ಚುವದೆಂದರೆ ಬೇರೆ ಭಾಗದಲ್ಲಿ ಮೊದಲೇ ಬೀಜಗಳನ್ನು ಹಾಕಿ ತಯಾರಿಸಿದ ಸಸಿಗಳನ್ನು ಕಿತ್ತಿ ಹೊಲದಲ್ಲಿ ಸಾಲಾಗಿ ಹಚ್ಚುವದು. ಹೀಗೆ ನಟಿ ಹಚ್ಚುವದರಿಂದ ಬೆಳೆಯು ಬಹಳ ಚೆನ್ನಾಗಿ ಬರುವದು.

ಇದನ್ನು ಬಿತ್ತಿ ಸುಮಾರು ೧ ತಿಂಗಳಿಗೆ—ಸಸಿಗಳಲ್ಲಿ ಗಣಿಕೆಗಳು ಇನ್ನೂ ಆಗದಿರುವಾಗ—ಅದರಲ್ಲಿ ಬೆಳೆದ ಕಸಕಡ್ಡಿಗಳು ನಾಶವಾಗಬೇಕೆಂಬ ಉದ್ದೇಶದಿಂದ ಬೆಳೆಯ ಮೇಲೆ ಕೊರಡು ಹೊಡೆಯುವರು. ಇದರಿಂದ ಕಸಕಡ್ಡಿಗಳೂ ಬತ್ತವೂ ಕೆಸರಿನಲ್ಲಿ ಸಿಕ್ಕುವವು. ಕೂಡಲೆ ಅದಕ್ಕೆ ನೀರು ಕಟ್ಟುವದರಿಂದ ಬತ್ತವು ಮಾತ್ರ ಮೊದಲಿನಂತೆ ಮೇಲಕ್ಕೆದ್ದು ಉಳಿದ ಕಸಕಡ್ಡಿಗಳು ಮಾತ್ರ ನಾಶವಾಗುವವು. ಕೊರಡು ಹೊಡೆಯುವದರಿಂದ

ಭೂಮಿಯು ಗಟ್ಟಿಯಾಗಿ ನೀರು ಬಹಳ ದಿನಗಳವರೆಗೆ ನಿಲ್ಲಲು ಅನುಕೂಲ ವಾಗುವದು. ಬತ್ತವು ಬೆಳೆಯುತ್ತಿರುವಾಗ ನೀರು ನಿಲ್ಲಬೇಕಾಗುವದು. ಅದಕ್ಕಾಗಿ ಸಪಾಟಾದ ಸಣ್ಣ ಸಣ್ಣ ತುಂಡು ಭೂಮಿಗಳನ್ನು (ಗದ್ದೆಗಳನ್ನು) ಮಾಡಿ ಅವುಗಳ ಸುತ್ತು ಕಟ್ಟೆಗಳನ್ನು ಕಟ್ಟಿರುವರು. ಬತ್ತವು ಬಿತ್ತಿದ ಮೇಲೆ ಸುಮಾರು ೪ ತಿಂಗಳಾಗುವಷ್ಟರಲ್ಲಿ ಅದು ತೆನೆ ಹಾಕುವದು. ಮುಂದೆ ೧ ತಿಂಗಳಲ್ಲಿ ಪೈರು ಮಾಗುವದು. ಅಕ್ಟೋಬರ, ನವ್ಹಂಬರಗಳಲ್ಲಿ ಅಂದರೆ ಕಾರ್ತಿಕ, ಮಾರ್ಗಶಿರ್ಷ ಮಾಸಗಳಲ್ಲಿ ಕೊಯ್ಯಲಿಕ್ಕೆ ಬರುವದು. ಕೊಯ್ದ ನಂತರ ಬತ್ತದ ಹುಲ್ಲನ್ನು ತುಳಿಸಿ ರಾಶಿ ಮಾಡುವದು. ಬತ್ತದ ಹುಲ್ಲು, ಬಣವೆಗಳನ್ನು ಹೊಚ್ಚುವದಕ್ಕೂ ದನಗಳು ತಿನ್ನುವದಕ್ಕೂ ಉಪಯೋಗವಾಗುತ್ತದೆ.

ಧಾರವಾಡ, ಬೆಳಗಾಂವ ಜಿಲ್ಲೆಗಳ ಪಶ್ಚಿಮ ಭಾಗ ಹಾಗೂ ಕಾರವಾರ ಜಿಲ್ಲೆಗಳಲ್ಲಿ ಮೇಲೆ ಹೇಳಿದ ಎಲ್ಲ ಅನುಕೂಲತೆಗಳಿರುವದರಿಂದ ಇದು ಅಲ್ಲಿ ಚೆನ್ನಾಗಿ ಬೆಳೆಯುವದು. ಇವೇ ಅನುಕೂಲತೆಗಳಿದ್ದ ಪಶ್ಚಿಮ ಕರಾವಳಿ ಹಾಗು ಪೂರ್ವ ಕರಾವಳಿ (ಕೃಷ್ಣಾ, ಗೋದಾವರಿ, ಹಾಗು ಕಾವೇರಿ ನದಿಗಳ ಡೆಲ್ಟಾ ಪ್ರದೇಶ)ಗಳಲ್ಲಿಯೂ ಇದು ಮುಖ್ಯ ಬೆಳೆಯಾಗಿದೆ. ಗಂಗಾ ನದಿಯ ಬಯಲುಪ್ರದೇಶದಲ್ಲಿ ಅಂದರೆ ಬಂಗಾಲ, ಬಿಹಾರ, ಉತ್ತರ-ಪ್ರದೇಶ ಗಳಲ್ಲಿ ಫಲವತ್ತಾದ ರೇವೆ ಮಣ್ಣಿನ ಭೂಮಿಯಿದೆ. ಹವೆಯು ಸಾಕಷ್ಟು ಆರ್ದ್ರ ಹಾಗೂ ಉಷ್ಣವಾಗಿದ್ದು ಸಾಕಷ್ಟು ಮಳೆಯೂ ಆಗುವದು. ಆದ್ದ ರಿಂದ ಅಲ್ಲಿ ಬತ್ತವನ್ನು ವಿಶೇಷವಾಗಿ ಬೆಳೆಯುವರು. ಪಂಜಾಬ ಹಾಗೂ ಪೂರ್ವ ಕರಾವಳಿಯಲ್ಲಿ ಕಾಲುವೆಗಳಿಂದ ನೀರಾವರಿಯನ್ನುಂಟು ಮಾಡಿಕೊಂಡು ಬತ್ತವನ್ನು ಬೆಳೆಯುತ್ತಿದ್ದಾರೆ.

## ಅಭ್ಯಸನಗಳು

(೧) ನಟಿ ಪದ್ಧತಿಯು ಅಂದರೇನು ? ಅದರಿಂದ ಲಾಭವೇನು ?

(೨) ಭಾರತದ ಯಾವಯಾವ ಭಾಗಗಳಲ್ಲಿ ಬತ್ತವು ವಿಶೇಷವಾಗಿ ಬೆಳೆಯುವದು? ಏಕೆ?

(೩) ಬತ್ತದಲ್ಲಿ ಕೊರಕು ಹೊಡೆಯುವದು ಯಾವಾಗ ಮತ್ತು ಏಕೆ ?

(೪) ಬತ್ತವನ್ನು ನೀರಾವರಿಯಿಂದ ಬೆಳೆಯುವ ಪ್ರದೇಶವಾವುದು ? ಅದಕ್ಕೆ ಕಾರಣವೇನು ?

(೫) ಬತ್ತವನ್ನು ಬಿತ್ತುವ ಮತ್ತು ಒಕ್ಕುವ ಕಾಲಗಳಾವವು ?

# ಗೋಧಿ

ಗೋಧಿಯು ಮಹತ್ವದ ಆಹಾರ ಧಾನ್ಯಗಳಲ್ಲಿ ಒಂದಾಗಿದ್ದು ಇದರ ಆಹಾರವು ಹೆಚ್ಚು ಪೌಷ್ಟಿಕವಾಗಿರುತ್ತವೆ. ಇದು ಚಳಿಗಾಲದ ಪೈರು. ಇದಕ್ಕೆ ಕಸುವುಳ್ಳ ಎರಿಭೂಮಿ ಇಲ್ಲವೆ ರೇವೆಮಣ್ಣಿನ ಭೂಮಿ ಬೇಕು. ಭೂಮಿಯು ಹಸಿಯನ್ನು ಹಿಡಿದಿಟ್ಟುಕೊಳ್ಳುವಂಥದು ಇರಬೇಕು. ಒಣ ಹವೆ ಹಾಗೂ ಸುಮಾರು ೨೦ ಇಂಚಿನಷ್ಟು ಮಳೆ ಇವು ಗೋಧಿಯ ಬೆಳೆಗೆ ಬಹಳ ಅನುಕೂಲ. ಬೆಳಿಗೆಯ ಕಾಲಕ್ಕೆ ಚಳಿಯು ಅವಶ್ಯವಾಗಿ ಬೇಕು. ಇದು ೨ ಅಥವಾ ೨॥ ಫೂಟಿಗಿಂತ ಹೆಚ್ಚು ಎತ್ತರ ಬೆಳೆಯುವದಿಲ್ಲ.


ಗೋಧಿ

ಗೋಧಿಯನ್ನು ಅಕ್ಟೋಬರ ತಿಂಗಳಲ್ಲಿ ಅಂದರೆ ಚಿತ್ತಿ, ಸ್ವಾತಿ ಮಳೆಗಳಲ್ಲಿ ಬಿತ್ತುವರು. ಈ ಕಾಲಕ್ಕೆ ಭೂಮಿಯು ಸಾಕಷ್ಟು ಹಸಿಯಿರುವದರಿಂದ ಇದಕ್ಕೆ ಮುಂದೆ ಮಳೆಯ ಅವಶ್ಯಕತೆ ಇರುವದಿಲ್ಲ. ಯಾಕಂದರೆ ಅದು ಕೇವಲ ೪ ತಿಂಗಳ ಪೈರಾಗಿರುವದರಿಂದ ಬಿತ್ತುವಾಗಿನ ಹಸಿಯು ಆರುವಷ್ಟರಲ್ಲಿಯೇ ಪೈರು ಕೈಗೆ ಬರುವದು. ಒಂದು ವೇಳೆ ಪೈರು ಚಿಕ್ಕದಿರುವಾಗ ತುಸು ಮಳೆಯಾದರೂ ಅಡ್ಡಿ ಇಲ್ಲ. ಮುಂದೆ ಮಳೆಯಾದರೆ ಅದಕ್ಕೆ ರೋಗ ತಗಲುವದು. ಈ ರೋಗಕ್ಕೆ ಭಂಡಾರರೋಗವೆನ್ನುತ್ತಾರೆ. ಇದರಿಂದ ಗೋಧಿಯ ತೆನೆಗಳಲ್ಲಿ ಕಾಳುಗಳಾಗವೆ ಅವು ಬಚ್ಚವಾಗುವವು. ಆದ್ದರಿಂದ ಗೋಧಿಯನ್ನು ಮಳೆಗಾಲದ ಕೊನೆಗೆ ಬಿತ್ತಿ ಚಳಿಗಾಲದಲ್ಲಿ ಬೆಳೆಮಕೊಳ್ಳುವರು. ಇವರ ಬೇರುಗಳು ನೆಲದಲ್ಲಿ ದೂರ ಇಳಿಯದ ಮೂಲಕ ಜೋಳದಂತೆ ಇದನ್ನು ಕೊಯ್ಯದೆ ಕೈಯಿಂದ ಕಿತ್ತಿ ತುಳಿಸಿ ಕಾಳುಗಳನ್ನು ಬೇರ್ಪಡಿಸುವರು. ಈ ಕ್ರಿಯೆಯಿಂದ ಉಂಟಾಗುವ ಹುಲ್ಲಿನಪುಡಿ( ಹೊಟ್ಟು)ಯನ್ನುದನಗಳ ಆಹಾರಕ್ಕಾಗಿಉಪಯೋಗಿಸುವರು.

ಇದು ಬೆಳವಲದಲ್ಲಿ ಹೆಚ್ಚಾಗಿ ಬೆಳೆಯುವದು. ಧಾರವಾಡ, ಬೆಳಗಾಂವ ಜಿಲ್ಲೆಗಳ ಪೂರ್ವಭಾಗ, ವಿಜಾಪೂರ, ಸೊಲ್ಲಾಪೂರ,

ಅಹಮ್ಮದನಗರ, ನಾಸಿಕ ಹಾಗೂ ಅಹಮ್ಮದಾಬಾದ ಜಿಲ್ಲೆಗಳಲ್ಲಿ ಎರೆ ಭೂಮಿ, ಒಣ ಹವೆಗಳಿದ್ದು ಮಳೆಯೂ ೨೦-೨೫ ಇಂಚಿನಷ್ಟು ಆಗುವದು. ಆ ಪ್ರದೇಶಗಳಲ್ಲಿ ಗೋದಿಯ ಬೆಳೆಗೆ ಬೇಕಾಗುವ ಅನುಕೂಲತೆಗಳಿರುವದರಿಂದ ಅಲ್ಲಿ ಅದು ಚೆನ್ನಾಗಿ ಬೆಳೆಯುವದು. ಉತ್ತರಪ್ರದೇಶ ಹಾಗೂ ಪಂಜಾಬಗಳಲ್ಲಿ ಫಲವತ್ತಾದ ರೇವೆಮಣ್ಣಿನ ಭೂಮಿ ಮತ್ತು ಒಣಹವೆಗಳಿವೆ. ನೀರಾವರಿಯಿಂದ ಭೂಮಿಗೆ ಬೇಕಾಗುವಷ್ಟು ಹಸಿಯು ದೊರೆಯುವದು. ಆದ್ದರಿಂದ ಆ ಪ್ರದೇಶಗಳಲ್ಲಿಯೂ ಗೋದಿಯು ಹೆಚ್ಚಾಗಿ ಬೆಳೆಯುವದು.

## ರಾಗಿ, ಸಾವಿ, ನವಣೆ, ಸೆಜ್ಜೆ

ಇವು ಮುಂಗಾರಿಯ ಬೆಳೆಗಳು. ಇವು ಮಹತ್ವದ ಧಾನ್ಯಗಳಾಗಿರದಿದ್ದರೂ ಬಡವರ ಆಹಾರವಾಗಿವೆ.

ಇವುಗಳನ್ನು ಜೂನ ತಿಂಗಳ ಪ್ರಾರಂಭಕ್ಕೆ ಬಿತ್ತುತ್ತಾರೆ. ಉಷ್ಣಹವೆ ಮತ್ತು ಮೇಲಿಂದ ಮೇಲೆ ಮಳೆಯ ಸಳಕುಗಳು ಬೇಕು. ಸಪ್ಟಂಬರ ತಿಂಗಳಲ್ಲಿ ಬೆಳೆಗಳು ಕೊಯ್ಯಲು ಬರುತ್ತವೆ.

ಇವು ಎಂಥ ಬಡಭೂಮಿಯಲ್ಲಿಯೂ ಕೂಡ ಬೆಳೆಯಬಲ್ಲವು. ಕುಲಾಬಾ, ರತ್ನಾಗಿರಿ, ಧಾರವಾಡ, ಬೆಳಗಾವಿ ಜಿಲ್ಲೆಗಳು ಮತ್ತು ಮೈಸೂರ, ಹೈದರಾಬಾದ ಸಂಸ್ಥಾನಗಳು ಈ ಬೆಳೆಗಳಿಗಾಗಿ ಪ್ರಸಿದ್ಧವಿರುತ್ತವೆ. ರಾಗಿಯಿಂದ ಮುದ್ದೆಯನ್ನೂ, ಸಾವಿ, ನವಣೆಗಳಿಂದ ಅನ್ನವನ್ನೂ ಸೆಜ್ಜೆಯಿಂದ ರೊಟ್ಟಿಯನ್ನೂ ಮಾಡಿ ಸೇವಿಸುವರು.

## ಅಭ್ಯಸನಗಳು

(೧) ಗೋದಿಯ ಬೆಳೆಗೆ ಅವಶ್ಯವಿರುವ ಭೂಮಿ ಮತ್ತು ಹವಾಮಾನ ಹಾಗು ಅದು ಬೆಳೆಯುವ ಪ್ರದೇಶಗಳನ್ನು ಹೇಳಿರಿ.

(೨) ಕೆಳಗಿನವುಗಳಿಗೆ ಕಾರಣ ಕೊಡಿರಿ:—

(ಅ) ಗೋದಿಯ ಬೆಳೆಯನ್ನು ಕೊಯ್ಯದೆ ಕೈಯಿಂದ ಕಿತ್ತುವರು.

(ಬ) ಇದನ್ನು ಚಳಿಗಾಲದ ಪ್ರಾರಂಭದಲ್ಲಿ ಬಿತ್ತುವರು.

(ಕ) ಗೋದಿಯನ್ನು ಬಿತ್ತಿದ ಮೇಲೆ ಮಳೆಯು ಬೇಕಾಗುವದಿಲ್ಲ.

(ಡ) ಪಂಜಾಬದಲ್ಲಿ ತಕ್ಕಷ್ಟು ಮಳೆಯಾಗದಿದ್ದರೂ ಅಲ್ಲಿ ಗೋದಿಯನ್ನು ಬೆಳೆಸುವರು.

(೩) ರಾಗಿ, ಸಾವಿ, ನವಣೆ, ಸೆಜ್ಜೆ ಆಹಾರದಲ್ಲಿ ಹೇಗೆ ಉಪಯೋಗವಾಗುವವು.

———

# (೨) ದ್ವಿದಲ ಧಾನ್ಯಗಳು

## ಬೇಳೆಯ ಕಾಳು:—ತೊಗರಿ

ತೊಗರಿಯು ಬೇಳೆಯ ಕಾಳುಗಳಲ್ಲಿ ಮುಖ್ಯವಾದುದು. ಇದನ್ನು ಸ್ವತಂತ್ರವಾಗಿ ಬಿತ್ತದೆ, ಮುಂಗಾರಿಯ ಜೋಳ, ಸಜ್ಜೆಗಳೊಡನೆ ಅಕ್ಕಡಿಯ ಫಲವನ್ನಾಗಿ ಬೆಳೆಸುವದೇ ಹೆಚ್ಚು. ಇದರ ಗಿಡಗಳು ೩–೩॥ ಫೂಟು ಬೆಳೆಯುವವು. ಇವಕ್ಕೆ ಅನೇಕ ಟಿಸಿಲುಗಳಿರುವವು.

ಇದರ ಬೆಳೆಯು ೬ ತಿಂಗಳದಿದ್ದು ಜೋಳವನ್ನು ಕೊಯ್ದ ಮೇಲೆಯೇ ಹೆಚ್ಚಾಗಿ ಬೆಳೆಯುವದು. ಇದು ಜೋಳವನ್ನು ಕೊಯ್ದ ತಿಂಗಳೊಪ್ಪತ್ತಿನಲ್ಲಿಯೇ ಹೂ ಬಿಡುವದು. ಆ ಕಾಲಕ್ಕೆ ಆಕಾಶವು ನಿರಭ್ರವಾಗಿದ್ದು ಸಾಕಷ್ಟು ಚಳಿ ಬೀಳುತ್ತಿರಬೇಕು. ಅಂದರೆ ಎಲ್ಲ ಹೂವು ಕಾಯಿಗಳಾಗುವವು. ಅವಕ್ಕೆ ಕೀಡಿಗಳೂ ಆಗುವದಿಲ್ಲ. ಒಂದು ವೇಳೆ ಮೋಡಗಳು ಆಗಿ ಚಳಿ ಬೀಳದಿದ್ದರೆ ಎಲ್ಲ ಹೂಗಳು ಉದುರುವವು. ಅಲ್ಲದೆ ಆದ ಕಾಯಿಗಳೂ ಹುಳಿತು ಜೊಟ್ಟವಾಗುವವು.

ಕಾಯಿಗಳು ಒಣಗಿದವೆಂದರೆ ಇದನ್ನು ಕೊಯ್ದು ಒಣಗಿಸಿ ಕಾಳು ಬೇರೆ ಮಾಡುವರು. ಇವುಗಳಿಗೆ ಹುಳ ಹತ್ತಬಾರದೆಂದು ಒಮ್ಮೆ ನೀರಲ್ಲಿ ತೊಯಿಸಿ ಒಣಗಿಸಿ ಇಡುವರು. ಇದು ಸಾತ್ವಿಕ ಆಹಾರಗಳಲ್ಲೊಂದಾದ್ದರಿಂದ ಇದರ ತೊವ್ವೆಯನ್ನು ಬೇನೆಯವರಿಗೂ ಉಪಯೋಗಿಸುವರು. ಇದರ ಕಟ್ಟಿಗೆಯು ಉರುವಲಕ್ಕೂ ಕಸಗೂಡಿಸಲಿಕ್ಕೂ ಬರುತ್ತದೆ.

---

## ಕಡಲೆ

ಬೇಳೆಯ ಕಾಳುಗಳಲ್ಲಿ ಕಡಲೆಯೂ ಮುಖ್ಯವಾದದ್ದು. ಇದು ಹಿಂಗಾರಿಯ ಬೆಳೆಯು. ಇದನ್ನು ಅಕ್ಟೋಬರ ತಿಂಗಳ ಕೊನೆಗೆ ಭೂಮಿಯು ಪೂರ್ಣ ಹಸಿಯಿರುವಾಗ ಬಿತ್ತುವರು. ಕಡಲೆಯನ್ನು ಹಿಂಗಾರಿಯ ಜೋಳದಲ್ಲಿ ಅಕ್ಕಡಿ ಫಲವನ್ನಾಗಿಯೂ ಇಲ್ಲವೆ ಸ್ವತಂತ್ರವಾಗಿಯೂ ಬಿತ್ತುವರು. ಇದರ ಗಿಡವು ತೀರ ಚಿಕ್ಕದಿದ್ದು ಅನೇಕ ಟೊಂಗೆಗಳಿಂದ ಕೂಡಿರುತ್ತದೆ. ಇದು ಬಿತ್ತಿದ ಮೂರು ತಿಂಗಳಿಗೆ ಹೂಬಿಟ್ಟು ಕಾಯಿಯಾಗುವದು. ಇದರ ಬೆಳೆಗೆ ಚಳಿಗಾಲವೇ ಹೆಚ್ಚು ಉತ್ತಮವು.

ರೋಗವೂ ಮಳೆಯೂ ಇದ್ದರೆ ಆಗತಕ್ಕಷ್ಟು ಕಾಯಿ (ಬುಡ್ಡಿ)ಗಳಾಗುವ ದಿಲ್ಲ. ಮತ್ತು ಕೀಡೆಗಳಾಗಿ ತಪ್ಪಲು ಹಾಗು ಬುಡ್ಡಿಯೊಳಗಿನ ಕಾಳು ಕಡಿ ಗಳನ್ನು ಸಹ ತಿಂದುಬಿಡುವವು. ಇದನ್ನು ಎಂಥ ಕನಿಷ್ಠ ಪ್ರತಿಯ ನೆಲದ ಲ್ಲಿಯೂ ಕೆಲಮಟ್ಟಿಗೆ ಬೆಳೆದುಕೊಳ್ಳಬಹುದು.

ಈ ಬೆಳೆಯು ಬಿತ್ತಿದ ನಾಲ್ಕು ತಿಂಗಳಿಗೆ ಬರುವದು. ಕೆಲವರು ಹಸೀ ಕಾಯಿಗಳನ್ನು ಸುಟ್ಟು ಇಲ್ಲವೆ ಸುಲಿದು ತಿನ್ನುವರು. ಕಡಲೆಯು ಕುದು ರೆಯ ದಾಣೆಗೂ, ಪಕ್ವಾನ್ನಕ್ಕೂ, ಬೇಳೆಗೂ ಉಪಯೋಗವಾಗುತ್ತದೆ.

---

## ಮಡಿಕೆ, ಹೆಸರು, ಅಲಸಂದಿ, ಉದ್ದು, ಅವರೆ, ಹುರಳಿ

ತೊಗರಿಯಂತೆ ಇವೂ ದ್ವಿದಲ ಧಾನ್ಯಗಳು. ಇವುಗಳಿಂದಲೂ ಬೇಳೆಯನ್ನು ಮಾಡುತ್ತಾರೆ. ಆದರೆ ಇಡಿಗಾಳುಗಳನ್ನು ಉಪಯೋಗಿಸು ವವೇ ಹೆಚ್ಚು. ಹುರಳಿಯನ್ನು ಹೆಚ್ಚಾಗಿ ದನಗಳ ಮುರುವಿಗಾಗಿಯೇ ಉಪಯೋಗಿಸುತ್ತಾರೆ.

ಇವುಗಳನ್ನು ತೊಗರಿಯಂತೆ ಅಕ್ಕಡಿಯ ಫಲವನ್ನಾಗಿಯೇ ಬೆಳೆಸು ವರು. ಆದರೆ ಹೊಂಬೆಸರು, ಬಿಳಿಅಲಸಂದಿ, ಉದ್ದು, ಹುರಳಿಗಳನ್ನು ಸ್ವತಂತ್ರವಾಗಿಯೂ ಬಿತ್ತಿ ಬೆಳೆಯುವರು. ಇವು ಬಿತ್ತಿದ ೩-೪ ತಿಂಗಳಲ್ಲಿ ಬರುತ್ತವೆ. ಇವೆಲ್ಲ ಬಳ್ಳಿಯಂತೆ ಹಬ್ಬುವವು. ಇವು ಕಾಯಿಗಳಾಗುವ ವೇಳೆಯಲ್ಲಿಯೂ ಮಳೆಯಿರಬೇಕು. ಇಲ್ಲದಿದ್ದರೆ ಆಗತಕ್ಕಷ್ಟು ಕಾಯಿ ಗಳಾಗವೆ ಆದ ಕಾಯಿಗಳೂ ಜಳ್ಳಾಗುವವು. ಇವು ಮಾಗಿದಮೇಲೆ ಬಿಸಿಲು ಗಾಳಿಗಳಿಂದ ಕಾಯಿಗಳು ಸಿಡಿದು ಕಾಳುಗಳು ಬಿದ್ದುಹೋಗುವ ದುಂಟು. ಆದಕ್ಕಾಗಿ ಇವು ಇನ್ನೂ ಸ್ವಲ್ಪ ಹಸಿಯಿರುವಾಗಲೇ ಕಿತ್ತು ಸಿಂಡೆಗಳನ್ನಾಗಿ ಕಟ್ಟುವರು. ಅವು ಸ್ವಲ್ಪ ಒಣಗಿದ ಮೇಲೆ ಥೂಳಿಸಿ ತೂರಿ ಕೇರಿ ಕಾಳು ಬೇರೆ ಮಾಡುವರು. ಇವುಗಳ ಹೊಟ್ಟನ್ನು ಕುದುರೆ ಮತ್ತು ದನಗಳು ಪ್ರೀತಿಯಿಂದ ತಿನ್ನುವವು.

### ಅಭ್ಯಸನಗಳು

(೧) ಅಕ್ಕಡಿ ಕಾಳುಗಳಾವವು? ಅವಕ್ಕೆ ಈ ಹೆಸರು ಬರಲು ಕಾರಣವೇನು?

(೨) ಸ್ವತಂತ್ರವಾಗಿ ಬಿತ್ತುವ ಅಕ್ಕಡಿ ಫಲಗಳಾವವು?

(೩) ಕಡಲೆಯನ್ನು ಹಿಂಗಾರಿಯ ಪೀಕಾಗಿಯೇ ಬೆಳೆಸುವದು ಏಕೆ? ಹುರಳಿಯ ಉಪಯೋಗವೇನು?

# ಎಣ್ಣೆಯ ಕಾಳುಗಳು

## ಶೇಂಗಾ (ನೆಲಗಡಲೆ)

ಇದು ಒಂದು ಪ್ರಕಾರದ ಎಣ್ಣೆಯಕಾಳು. ಇದರ ಕಾಯಿಗಳು ಕಡಲೆಯ ಕಾಯಿಗಳಂತೆ ( ಬುಡ್ಡಿ ) ಗಿಡದ ಮೇಲ್ಭಾಗದಲ್ಲಿ ಆಗದೆ ನೆಲದೊಳಗೆ ಬೇರುಗಳಲ್ಲಿ ಆಗುವವು. ಆದ್ದರಿಂದ ಇದನ್ನು ನೆಲಗಡಲೆ ಎಂದೂ ಕರೆಯುವರು.



ಶೇಂಗಾ

ಇದರಲ್ಲಿ (೧) ಹಬ್ಬು ಶೇಂಗಾ (೨) ಗಿಡಶೇಂಗಾ ಎಂದು ಎರಡು ಪ್ರಕಾರಗಳಿವೆ. ಹಬ್ಬು ಶೇಂಗಾದ ಕಾಳು ತುಸು ದೊಡ್ಡವು.

ಉಸುಕು ಕೂಡಿದ ಮಿದುವಾದ ಭೂಮಿಯು ಇದಕ್ಕೆ ಒಳ್ಳೇದು. ಬಿತ್ತುವ ಮೊದಲು ಭೂಮಿಯನ್ನು ಮಿದುವು ಮಾಡಿ, ಗೊಬ್ಬರ ಹಾಕಿ, ಹದಗೊಳಿಸಿ ಇಡುವರು. ಮೇ, ಜೂನ ತಿಂಗಳುಗಳಲ್ಲಿ ಬಿತ್ತಲಿಕ್ಕೆ ಆರಂಭಿಸುವರು. ಇದರ ಕಾಳುಗಳನ್ನು ಎಳೆಶೆಡ್ಡಿಗಳಿಂದಲೇ ಬಿತ್ತುವದು. ಇದನ್ನು ಸ್ವತಂತ್ರವಾಗಿಯೂ, ಸೆಜ್ಜೆ, ಹತ್ತಿಗಳೊಡನೆ ಮಿಶ್ರಮಾಡಿಯೂ ಬಿತ್ತುವದುಂಟು. ಇದು ಸಾಧಾರಣ ೫–೬ ತಿಂಗಳಲ್ಲಿ ಬರುವದು.

ಕಾಯಿಬಿಡುವ ಸಮಯದಲ್ಲಿ ಮಳೆಯಿಂದ ನೆಲವು ನೆನೆದು ಮಿದುವಾಗಿದ್ದರೆ ಬೇರುಗಳು ನೆಲದಲ್ಲಿ ಇಳಿಯಲು ಹೆಚ್ಚು ಅನುಕೂಲವಾಗುವದು. ಅಲ್ಲದೆ ಹಬ್ಬುಶೇಂಗಾದ ಬಳ್ಳಿಯ ಗಣ್ಣುಗಣ್ಣಿಗೆ ಬೇರು ಬಿಟ್ಟು ಕಾಯಿಗಳು ಹೆಚ್ಚು ಪ್ರಮಾಣದಲ್ಲಿ ಆಗುವವು. ಗಿಡಶೇಂಗಾದ

ಕಾಯಿಗಳು ತಾಯಿಬೇರಿನ ಸುತ್ತಲಿನ ತಂತುಬೇರುಗಳಲ್ಲಿ ಆಗುವವು. ಕಾಯಿಗಳು ಸಾಕಷ್ಟು ಮಾಗಿದ ಮೇಲೆ ಇವುಗಳನ್ನು ಕಿತ್ತುವರು. ಕಿತ್ತುವಾಗ ಬೇರಿನೊಡನೆ ಬಾರದೆ ನೆಲದಲ್ಲಿ ಉಳಿವ ಕಾಯಿಗಳನ್ನು ರಂಟೆ ಹೊಡೆದು ಮಣ್ಣೊಳಗಿಂದ ಆರಿಸಿ ತೆಗೆಯುವರು.

ಇದನ್ನು ಮೈಸೂರು ಮತ್ತು ಮದ್ರಾಸದ ಅರ್ಕಾಟ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವರು.

ಶೇಂಗಾದ ಎಣ್ಣೆಯು ಅಡುಗೆಗೂ ಸಾಬೂಣವನ್ನು ತಯಾರಿಸಲಿಕ್ಕೂ ಬರುತ್ತದೆ. ಮತ್ತು ಹಿಂಡಿಯು ದನಗಳಿಗೆ ಪೌಷ್ಟಿಕ ಆಹಾರವಾಗಿದ್ದು ಗೊಬ್ಬರದಂತೆಯೂ ಉಪಯೋಗವಾಗುವದು.

---

## ಕುಸುಬಿ

ಇದು ಎಣ್ಣೆಯ ಕಾಳುಗಳಲ್ಲಿ ಒಂದಾಗಿದೆ. ಇದನ್ನು ವಿಶೇಷವಾಗಿ ಅಕ್ಕಡಿಯ ಕಾಳುಗಳನ್ನು ಬಿತ್ತಿದಂತೆ ಗೋದಿಯ ಸಂಗಡ ಎಳೆಸಡ್ಡಿಗಳಿಂದಲೇ ಬಿತ್ತುವರು.

ಇದು ಬಲಿಯಿತೆಂದರೆ ಇದರ ಎಲೆಗಳು ತುದಿಗಳಲ್ಲಿ ಚೂಪಾದ ಮುಳ್ಳುಗಳನ್ನು ಧರಿಸುವವು. ಗೋದಿಯನ್ನು ಕಿತ್ತಿದ ಮೇಲೆಯೇ ಇದಕ್ಕೆ ಮುಳ್ಳು-ಗಳಿಂದೊಡಗೂಡಿದ ಕಾಯಿಗಳಾಗುವವು. ಕಾಯಿಗಳು ಮಾಗಿದ ಮೇಲೆ ಅವುಗಳ ಬಾಯಿ ತೆರೆಯುವವು. ತಂಪು ವೇಳೆಯಲ್ಲಿ ಇದರ ಮುಳ್ಳುಗಳು ಮಿದುವಾಗಿದ್ದು ಬಾಯಿಮುಚ್ಚಿರುವವು. ಆದ್ದರಿಂದ ಇದನ್ನು ನಸುಕಿನಲ್ಲಿಯೇ ಕೊಯ್ದು ಸಣ್ಣ ಸಣ್ಣ ಗುಂಪುಗಳನ್ನು ಮಾಡಿ ಇಡುವರು. ಇವುಗಳಿಗೆ ತಟ್ಟು ಗಳೆನ್ನುವರು. ಅವುಗಳನ್ನು ಮಧ್ಯಾನ್ಹದ ಬಿಸಿಲಿನಲ್ಲಿ ವಿಸ್ತಾರವಾದ ಹಾಸುಗೆಯ ಮೇಲಿಟ್ಟು ಬಡಿದು, ತೂರಿ, ಕಾಳುಗಳನ್ನು ತೆಗೆಯುವರು.

ಕುಸುಬಿಯ ಎಣ್ಣೆಯನ್ನು ಅಡುಗೆಯಲ್ಲಿ ಉಪಯೋಗಿಸುತ್ತಾರೆ. ಈ ಎಣ್ಣೆಗೆ ಒಳ್ಳೆಣ್ಣೆ ಎಂತಲೂ ಅನ್ನುವರು. ಇದರ ಹಿಂಡಿಯು ದನಗಳಿಗೆ ಪೌಷ್ಟಿಕ ಆಹಾರವಾಗಿದೆ.

### ಅಭ್ಯಸನಗಳು

(೧) ಕಡಲೆ ಮತ್ತು ಶೇಂಗಾ ಇವುಗಳ ಬೆಳೆಗಳಲ್ಲಿರುವ ಹೋಲಿಕೆ ಹಾಗೂ ವ್ಯತ್ಯಾಸಗಳನ್ನು ಹೇಳಿರಿ.
(೨) ಶೇಂಗಾದಲ್ಲಿಯ ಪ್ರಕಾರಗಳಾವವು? ಅವುಗಳಲ್ಲಿ ಯಾವದರಿಂದ ಹೆಚ್ಚು ಬೆಳೆ ಬರುವದು.
(೩) ಕುಸುಬಿಯನ್ನು ಬಿತ್ತುವ ಮತ್ತು ಒಕ್ಕುವ ರೀತಿಯನ್ನು ಹೇಳಿರಿ.
(೪) ಶೇಂಗಾ ಮತ್ತು ಕುಸುಬಿ ಇವುಗಳ ಎಣ್ಣೆ ಹಾಗೂ ಹಿಂಡಿಗಳ ಉಪಯೋಗವೇನು?

# ಇತರ ಬೆಳೆಗಳು

## ಕಬ್ಬು

ಕಬ್ಬು ಜೋಳದ ದಂಟಿನಂತಿದ್ದು ಅದಕ್ಕಿಂತ ತುಸು ಗಡುತರವಿರುತ್ತದೆ. ಆದರೆ ಜೋಳದ ತೆನೆಗಳಂತೆ ಇದಕ್ಕೆ ತೆನೆಗಳಾಗುವದಿಲ್ಲ.


ಕಬ್ಬು

ಇದು ಸಾಮಾನ್ಯವಾಗಿ ಬತ್ತ ಬೆಳೆಯುವಲ್ಲೆಲ್ಲಾ ಬೆಳೆಯುವದು. ಯಾಕಂದರೆ ಬತ್ತಕ್ಕೆ ಬೇಕಾಗುವ ಅನುಕೂಲತೆಗಳೇ ಕಬ್ಬಿಗೂ ಬೇಕು. ಫಲವತ್ತಾದ ರೇವೆ ಮಣ್ಣಿನ ಭೂಮಿ, ಇಲ್ಲವೆ ಕಪ್ಪು ಮಿಶ್ರಿತ ಕೆಂಪು ಭೂಮಿಯು ಬೇಕು. ಭೂಮಿಯು ಕಸುವುಳ್ಳದ್ದು, ನೀರು ಬಸಿಯದಂಥದೂ ಇರಬೇಕು. ಭೂಮಿಯು ಪಿಂಡಾಗಿದ್ದಷ್ಟು ಒಳಿತು. ಬತ್ತದಂತೆ ಇದಾದರೂ ಉಷ್ಣಹವೆಯಲ್ಲಿ ಬೆಳೆಯುವ ಪೈರು. ಇದಕ್ಕಾದರೂ ನೀರು ಬಹಳ ಬೇಕು. ಸುಮಾರು ೪೦ ಇಂಚಿಗಿಂತ ಹೆಚ್ಚು ಮಳೆಬೇಕು. ಅಷ್ಟು ಮಳೆಯಾಗದಲ್ಲಿ ನೀರಾವರಿಯ ಅನುಕೂಲತೆಗಳಾದರೂ ಇರಬೇಕು. ಕಬ್ಬು ಮುಖ್ಯವಾಗಿ ತೋಟಪಟ್ಟಿಯ ಬೆಳೆಯು.

ಕಬ್ಬು ಒಂದು ವರುಷದ ಪೈರು. ಮೊದಲು ಭೂಮಿಯನ್ನು ಪೊಳ್ಳು ಮಾಡಿ ಗೊಬ್ಬರ ಹಾಕಿ ಹದಮಾಡಿಕೊಳ್ಳುವರು. ಆದರಲ್ಲಿ ರಂಟೆಯಿಂದ ಆಳತೆಗೆ ಸರಿಯಾದ ಸಾಲುಗಳನ್ನು ಮಾಡಿ ಆ ಸಾಲುಗಳಲ್ಲಿ ಗಣ್ಣುಗಳುಳ್ಳ ಕಬ್ಬಿನ ಗಣಿಕೆಗಳನ್ನು ಗೇಣು ಗೇಣು ಅಂತರದಿಂದ ಊರುವರು. ಮೇಲೆ ಜಿನುಗು ಮಣ್ಣನ್ನು ಹಾಕುವರು. ಇಂಥ ಎರಡು ಸಾಲುಗಳ ನಡುವಿನ ಅಂತರವು ಸುಮಾರು ೩ ಗೇಣಿನಷ್ಟು ಇರುತ್ತದೆ. ಈ ಸಾಲುಗಳಲ್ಲಿ ನೀರು ಬಿಡುವರು. ಇದರಿಂದ ಊರಿದ ಗಣಿಕೆಗಳಲ್ಲಿಯ ಗಣ್ಣುಗಳಲ್ಲಿ ಮೊಳಕೆಗಳೊಡೆದು ಮೇಲೆ ಬರುವವು. ಪೈರು ದೊಡ್ಡದಾದ ಬಳಿಕಂತೂ ನೀರು

ಬಹಳ ಬೇಕು. ಅದರಂತೆ ಬಿಸಿಲು ಬಿದ್ದಷ್ಟು ತೀವ್ರ ಬೆಳೆಯುವದು. ಜಾವಾ ಕಬ್ಬನ್ನು ಒಂದೇ ಸಲ ನೆಟ್ಟು ಅದರಿಂದ ೨-೩ ಸಲ ಪೀಕು ತೆಗೆದುಕೊಳ್ಳುವರು.

ಬೆಳೆಯು ಪೂರ್ಣ ಸಿದ್ಧವಾದ ಮೇಲೆ ಅದನ್ನು ಕೊಯ್ದು ಗರಿಗಳನ್ನು ಸುಲಿದು ಗಾಣದಿಂದ ರಸವನ್ನು ಹಿಂಡುವರು. ಈ ರಸವನ್ನು ಕುಡಿಯ ಲಿಕ್ಕೆ ಉಪಯೋಗಿಸುವರು. ಅಲ್ಲದೆ ಕೊಪ್ಪರಿಗೆಯಲ್ಲಿ ಹಾಕಿ ಕಾಯಿಸಿ ಅದರಿಂದ ಬೆಲ್ಲ, ಸಕ್ಕರೆ, ಕಾಕಂಬಿ ಮೊದಲಾದವುಗಳನ್ನು ತಯಾರಿಸುವರು. ಇವುಗಳನ್ನು ಹಾಕಿ ಪಕ್ವಾನ್ನವನ್ನು ಮಾಡುವರು. ಕಬ್ಬನ್ನು ಹೆಚ್ಚಾಗಿ ತಿನ್ನಲೂ ಉಪಯೋಗಿಸುತ್ತಾರೆ. ಇದರ ಸೊಪ್ಪೆಯು ಉರುವಲಕ್ಕೂ ಗರಿ ಗಳು ದನಗಳ ಮೇವಿಗಾಗಿಯೂ ಉಪಯೋಗವಾಗುವವು.

ಕಬ್ಬಿನ ಬೆಳೆಗೆ ಅನುಕೂಲವಾದ ಭೂಮಿ, ಹವೆ ಹಾಗೂ ಮಳೆ ಇವು ಮುಂಬೈ ಪ್ರಾಂತದ ಮಲೆನಾಡು, ಪೂರ್ವ ಕರಾವಳಿಯ ಡೆಲ್ಟಾ ಪ್ರದೇಶ ಗಳಲ್ಲಿ ಕಂಡುಬರುವವು. ಆದ್ದರಿಂದ ಅಲ್ಲಿ ಕಬ್ಬು ಚನ್ನಾಗಿ ಬೆಳೆಯುವದು. ಉತ್ತರ ಪ್ರದೇಶದಲ್ಲಿ ಬೆಳೆಯುವಷ್ಟು ಕಬ್ಬು ಭಾರತದ ಇನ್ನಾವ ಭಾಗ ದಲ್ಲಿಯೂ ಬೆಳೆಯುವದಿಲ್ಲ.

ಉತ್ತಮ ತರಗತಿಯ ಬೆಲ್ಲವನ್ನು ತಯಾರಿಸುವದಕ್ಕಾಗಿ ಕೊಲ್ಹಾಪುರದ ಸುತ್ತಲಿನ ಭಾಗವು ಪ್ರಸಿದ್ಧವಿದೆ.

## ಅಭ್ಯಸನಗಳು

(೧) ಕಬ್ಬಿನ ಬೆಳೆಯ ವೈಶಿಷ್ಟ್ಯವೇನು?

(೨) ಕಬ್ಬನ್ನು ಬಿತ್ತುವ ಕ್ರಮವನ್ನು ವರ್ಣಿಸಿರಿ.

(೩) ಕಬ್ಬು ಮನುಷ್ಯನಿಗೆ ಎಷ್ಟರ ಮಟ್ಟಿಗೆ ಉಪಯೋಗವಿದೆ?

ಹತ್ತಿಯನ್ನು ನೀವು ನೋಡಿರುವಿರಲ್ಲವೆ? ಅದು ಒಂದು ಸಣ್ಣ ಗಿಡದ ಕಾಯಿಯಿಂದ ಆದದ್ದಿರುತ್ತದೆ. ಇದರ ಬೆಳೆಯು ಚನ್ನಾಗಿ ಬರಬೇಕಾದರೆ ಆಳವಾದ ಎರೆ ಇಲ್ಲವೆ ರೇವೆ ಮಣ್ಣಿನ ಭೂಮಿಯು ಬೇಕು. ಭೂಮಿಯು ಹಸಿಯನ್ನು ಕಾಯ್ದುಕೊಳ್ಳುವಂಥದಿರಬೇಕು. ೨೫–೩೦ ಇಂಚಿನಷ್ಟು ಮಳೆ ಆಗುತ್ತಿರಬೇಕು. ಮಳೆ ಕಡಿಮೆಯಾಗುತ್ತಿದ್ದರೆ ನೀರಾವರಿಯಿಂದ ಸಹ ಭೂಮಿಗೆ ಹಸಿಯನ್ನು ಪೂರೈಸಿಕೊಂಡು ಹತ್ತಿಯನ್ನು ಬೆಳೆಯಬಹುದು. ಕಾಯಿ ಒಡೆಯುವ ಕಾಲಕ್ಕೆ ಬಿಸಿಲು ಬೇಕು. ಹವೆಯು ಒಣದೂ ಉಷ್ಣವಾದದ್ದೂ ಇರಬೇಕು.



**ಹತ್ತಿ**

ಹತ್ತಿಯಿಂದ ಹೊರಡುವ ಅರಳೆ ಹಾಗೂ ತಂತುಗಳ ಉದ್ದಳತೆಯ ಮೇಲಿಂದ ಅದರಲ್ಲಿ ಜಡೆಹತ್ತಿ, ಸಾದಾ ಹತ್ತಿ ಎಂದು ಮುಖ್ಯವಾದ ಎರಡು ಭಾಗಗಳನ್ನು ಕಲ್ಪಿಸಿದ್ದಾರೆ. ಸಾದಾ ಹತ್ತಿಯಲ್ಲಿಯೂ ಕಪ್ಲಂಡ, ಜಯವಂತ, ಜಯಧರ, ಲಕ್ಷ್ಮಿ ಇತ್ಯಾದಿ ಪ್ರಕಾರಗಳಿವೆ.

**ಜಡೆಹತ್ತಿ:** ಇದರ ಗಿಡವು ೫–೬ ಫೂಟು ಎತ್ತರ ಬೆಳೆಯುವದು. ಇದಕ್ಕೆ ಸ್ವಲ್ಪ ಹೆಚ್ಚು ಮಳೆಬೇಕು. ಇದರ ಅರಳೆಯು ಹೆಚ್ಚು ನ್ನುಣು ವಾಗಿದ್ದು ತಂತುಗಳು ಉದ್ದವಾದವುಗಳಿರುತ್ತವೆ.

**ಸಾದಾ ಹತ್ತಿ:** ಇದು ಹಿಂಗಾರಿಯ ಬೆಳೆಯಿದ್ದು, ಆರು ತಿಂಗಳಲ್ಲಿ ಬೆಳೆದು ಬರುವದು. ಇದು ಧಾರವಾಡ, ಬೆಳಗಾವಿ ಜಿಲ್ಲೆಗಳ ಪೂರ್ವಭಾಗ ವಿಜಾಪುರ, ಸೊಲ್ಲಾಪುರ, ಗುಜರಾತ ಮುಂತಾದ ಭಾಗಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

ಆಗಸ್ಟ ತಿಂಗಳ ಮಧ್ಯದಲ್ಲಿ ಅಂದರೆ ಮಘಾ ಮಳೆಯು ಆರಂಭವಾದ ಕೂಡಲೆ ಇದನ್ನು ಬಿತ್ತಲು ಪ್ರಾರಂಭಿಸುವರು. ಇದನ್ನು ಬಿತ್ತಲಿಕ್ಕೆ ಗಿರಣಿಯ ಕಾಳುಗಳಿಗಿಂತ ಆರಿಸಿದ ಕಾಳುಗಳನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಇವುಗಳನ್ನು ಬಿತ್ತುವ ಮೊದಲು ಅವರಲ್ಲಿರುವ ಅರಳೆಯ ಗುಂಜು ಮೊದಲಾದವುಗಳನ್ನು ಆರಿಸಿ, ಶೆಗಣಿ ನೀರಿನಲ್ಲಿ ಕಲಿಸಿ ಕಾಳು ಬಿಡಿಬಿಡಿಯಾಗುವಂತೆ ಮಾಡುವರು. ಹತ್ತಿಯನ್ನು ಕೂರಿಗೆಯಿಂದ ಬಿತ್ತದೆ ಹೆಚ್ಚಾಗಿ ಅವರ ಸಾಲುಗಳಲ್ಲಿ ಎಳೆಸಿದ್ದಿಗೆಯಿಂದ ಹಾಕಿಸುವರು. ಇವು ಬಿತ್ತಿದ ೮-೧೦ ದಿವಸಕ್ಕೆ ಮೊಳೆಯುವವು. ಅವು ಬೆಳೆಯುತ್ತ ಬಂದಂತೆ ಹೊಲದಲ್ಲಿ ಎಡೆ ಹೊಡೆಯುವ ಕೆಲಸವು ಸಾಗುವದು. ಅದರಿಂದ ಸಾಲುಗಳ ನಡುವಿನ ಕಸವು ಹೋಗುವದು. ಇದರ ಬೇರುಗಳು ಭೂಮಿಯಲ್ಲಿ ಸಾಕಷ್ಟು ಕೆಳಗೆ ಇಳಿಯುವದರಿಂದ ಒಂದೆರಡು ಸಾರೆ ಮಳೆಯಾದರೂ ಸಾಕು.

ಮುಂದೆ ೪-೫ ತಿಂಗಳುಗಳಲ್ಲಿ ಅಂದರೆ ಚಳಿಗಾಲದಲ್ಲಿ ಕಾಯಿಗಳಾಗುವವು. ಫಾಲ್ಗುಣಮಾಸದಲ್ಲಿ ಬಿಸಿಲು ಹೆಚ್ಚಾಗಲು ಕಾಯಿಗಳು ಒಡೆದು ಹತ್ತಿಯು ಹೊರಬೀಳುವದು. ಆಗ ಅದನ್ನು ಬಿಡಿಸಿ ಮನೆಗೆ ತರುವರು.

ಹೀಗೆ ಬಿಡಿಸಿತಂದ ಹತ್ತಿಯನ್ನು ರೈತರು ಪೇಟೆಯಲ್ಲಿ ಮಾರುವರು. ಅದನ್ನು ಕೊಂಡ ಗಿರಣಿಯ ಮಾಲಿಕರು ಅರೆಸಿ(ಕಾಳುಗಳನ್ನು ಬೇರೆಮಾಡಿ) ಬಂದ ಅರಳೆಯಿಂದ ನೂಲು, ಬಟ್ಟೆ ಮುಂತಾದವುಗಳನ್ನು ತಯಾರಿಸುತ್ತಾರೆ. ಇವರ ಕಾಳುಗಳು ಎಣ್ಣೆ ತೆಗೆಯಲಿಕ್ಕೂ, ದನಗಳ ಆಹಾರಕ್ಕೂ, ಬಿತ್ತಲಿಕ್ಕೂ ಉಪಯೋಗವಾಗುತ್ತವೆ.

## ಅಭ್ಯಸನಗಳು

(೧) ಹತ್ತಿಯ ಬೆಳೆಗೆ ಎಂಥ ಭೂಮಿಯು ಬೇಕು?

(೨) ಸಾಧಾರಣ ಯಾವ ಕಾಲದಲ್ಲಿ ಹತ್ತಿಯನ್ನು ಬಿಡಿಸುತ್ತಾರೆ?

(೩) ಜೋಳ ಮತ್ತು ಹತ್ತಿ ಇವುಗಳ ಬಿತ್ತಿಗೆಯಲ್ಲಿ ಇರುವ ವ್ಯತ್ಯಾಸವೇನು?

(೪) ಜೋಳದ ಬೆಳೆಯಂತೆ ಇದಕ್ಕೆ ಮೇಲಿಂದಮೇಲೆ ಆಗುವ ಮಳೆಯು ಅವಶ್ಯಕತೆಯಿರುವದಿಲ್ಲ. ಏಕೆ?

(೫) ಹತ್ತಿಯ ಸಾಲುಗಳಲ್ಲಿ ಎಡೆ ಹೊಡೆಯುವದರ ಉದ್ದೇಶವೇನು?

(೬) ಹತ್ತಿಯ ಕಾಳುಗಳ ಉಪಯೋಗವೇನು?

# ತಂಬಾಕ

ಇದು ಒಂದು ಸಣ್ಣ ಗಿಡದ ಎಲೆಯಾಗಿರುತ್ತದೆ. ಇದರ ಗಿಡವು ಸುಮಾರು ಒಂದು ಒಂದೂವರೆ ಫೂಟು ಎತ್ತರವಿರುವದು. ಇದನ್ನು ಮುಂಬಯಿ ಪ್ರಾಂತದ ನಿಪ್ಪಾಣಿಯ ಭಾಗ, ಮದ್ರಾಸಪ್ರಾಂತ, ಗುಜರಾಥಗಳಲ್ಲಿ ಹೆಚ್ಚಾಗಿ ಬೆಳೆಸುವರು.


ತಂಬಾಕ

ಇದರ ಬೀಜಗಳು ಬಹು ಸಣ್ಣವು. ಅವುಗಳನ್ನು ಬೂದಿಯಲ್ಲಿ ಕೂಡಿಸಿ ಮೊದಲೇ ತಯಾರಿಸಿದ ಮಡಿಗಳಲ್ಲಿ ಹೊಯ್ಯುವರು. ಈ ಹೊಯ್ದ ಬೀಜಗಳ ಮೇಲೆ ಹೆಚ್ಚಾಗಿ ಮಣ್ಣನ್ನು ಹಾಕುವದಿಲ್ಲ. ಈ ಮಡಿಗಳಿಗೆ ಆಗಾಗ ನೀರು ಚಿಮುಕಿಸುತ್ತಿರಬೇಕು. ಅಂದರೆ ಬೀಜಗಳು ಮೊಳೆತು ಸಸಿಗಳಾಗುವವು.

ಸಸಿಗಳು ೨ ತಿಂಗಳು ಬೆಳೆದ ಮೇಲೆ ಅವುಗಳನ್ನು ಕಿತ್ತಿ ಹೊಲಗಳಲ್ಲಿ ಹಚ್ಚುವರು. ಈ ಹೊಲವನ್ನು ಮೊದಲೇ ರಂಟೆ, ಕುಂಟೆಗಳನ್ನು ಹೊಡೆದು ಹದಗೊಳಿಸುತ್ತಾರೆ. ಈ ಸಸಿಗಳನ್ನು ರಂಟೆಯ ಎರಡು ಸಾಲುಗಳ ಮಧ್ಯದಲ್ಲಿ ಹಚ್ಚಿ ಸಾಲುಗುಂಟ ನೀರು ಬಿಡುವರು. ತಂಬಾಕ ಬೆಳೆಯುವಾಗ ನೆಲವನ್ನು ಆಗಾಗ ಪೊಳ್ಳು ಮಾಡುತ್ತಾರೆ. ಮತ್ತು ಎಲೆಗಳ ಸಂದುಗಳಲ್ಲಿ ದೇಟಿನಿಂದ ಹೊರಡುವ ಕವಲಿನ ಕುಡಿಗಳನ್ನು ಕತ್ತರಿಸಿ ತೆಗೆಯುತ್ತಾರೆ. ಅಲ್ಲದೆ ಅದನ್ನು ಉದ್ದಕ್ಕೆ ಹೆಚ್ಚಾಗಿ ಬೆಳೆಯಗೊಡುವದಿಲ್ಲ. ಹೀಗೆ ಕುಡಿಗಳನ್ನು ಕತ್ತರಿಸುವದರಿಂದ ಎಲೆಗಳು ದಪ್ಪವೂ, ವಿಸ್ತಾರವೂ, ಸತ್ವವುಳ್ಳವೂ ಆಗುವವು. ಇದು ಸಾಧಾರಣ ೬ ತಿಂಗಳ ಪೈರು. ಮುಂದೆ ಎಲೆಗಳು ಜಿಗುಟುಳ್ಳವೂ, ಹಳದೀ ಬಣ್ಣದವೂ ಆದಮೇಲೆ ಇದನ್ನು

ಕೊಪ್ಪು ಸೆಂಡಿಗಪ್ಪಿ ತಗ್ಗುಗಳಲ್ಲಿ ಹೂಳಿ ಹದಗೊಳಿಸುವರು. ಆಗ ಅದಕ್ಕೆ ಒಂದುತರದ ಬಣ್ಣವು ಬರುತ್ತದೆ. ಇದೇ ತಂಬಾಕ.

ಇದು ಆಹಾರ ಪದಾರ್ಥವಲ್ಲದಿದ್ದರೂ ಬೀಡಿ ಸಿಗರೇಟುಗಳನ್ನು ಕಟ್ಟಿ ಸೇದುವದಕ್ಕೂ ನಸ್ಯವನ್ನು ತಯಾರಿಸಲಿಕ್ಕೂ, ತಾಂಬೂಲದೊಡನೆ ಸೇವಿಸುವದಕ್ಕೂ ಹೆಚ್ಚಾಗಿ ಉಪಯೋಗಿಸುವರು.

### ಅಭ್ಯಸನಗಳು

(೧) ತಂಬಾಕದ ಸಸಿಗಳನ್ನು ಹೇಗೆ ತಯಾರಿಸುವರು?

(೨) ತಂಬಾಕದ ಕುಡಿಗಳನ್ನು ಯಾಕೆ ಕತ್ತರಿಸುವರು?

(೩) ತಂಬಾಕದ ಬೇಡಿಕೆ ಪೇಟೆಯಲ್ಲಿ ಯಾಕೆ ಹೆಚ್ಚಾಗಿದೆ?

(೪) ಇದು ಯಾವ ಯಾವ ಭಾಗದಲ್ಲಿ ಬೆಳೆಯುತ್ತದೆ.

## ಸಣಬು

ಸಣಬು ಪುಂಡಿಯ ಗಿಡಗಳಂತೆ ನೀಟಾಗಿ ಉದ್ದಕ್ಕೆ ಬೆಳೆಯುವದು. ಇದರ ಬೆಳೆಗೆ ಒಳ್ಳೆ ಕಸುವುಳ್ಳ ರೇವೆ ಮಣ್ಣಿನ ಭೂಮಿ ಬೇಕು. ಮತ್ತು ಆರ್ದ್ರತೆಯಿಂದ ಕೂಡಿದ ಉಷ್ಣ ಹವೆಯಿದ್ದು ಸಾಕಷ್ಟು ಮಳೆ ಬೀಳುತ್ತಿರಬೇಕು. ಈ ಅನುಕೂಲತೆಗಳಿರುವ ಬಂಗಾಲ, ಬಿಹಾರ, ಓಡಿಸಾ ಪ್ರಾಂತಗಳಲ್ಲಿ ಇದನ್ನು ಹೆಚ್ಚಾಗಿ ಬೆಳೆಯುತ್ತಿರುವರು.

ಇದರ ಬೆಳೆಯಿಂದ ಭೂಮಿಯು ನಿಸ್ಸತ್ವವಾಗುವದು. ಆದರೆ ಮೇಲ್ಗಿಂದ ಭಾಗದಲ್ಲಿ ಹರಿದಿರುವ ಗಂಗಾ, ಬ್ರಹ್ಮಪುತ್ರಾ, ಮಹಾನದಿಗಳಿಂದ ಬಂದ ರೇವೆಯಿಂದ ಆ ಭೂಮಿಯು ಪುನಃ ಸತ್ವವುಳ್ಳದ್ದಾಗುವದು. ಆದ್ದರಿಂದ ಆ ಭಾಗದಲ್ಲಿ ಇದು ಮಹತ್ವದ ಬೆಳೆಯಾಗಿದೆ. ಇತ್ತೀಚೆಗೆ ತ್ರಾವಣಕೋರ ಸಂಸ್ಥಾನದಲ್ಲಿಯೂ ಇದನ್ನು ಬೆಳೆಯಿಸುವ ಪ್ರಯತ್ನ ನಡೆದಿದೆ.

ಇದರ ಗಿಡಗಳನ್ನು ಪುಂಡಿಯ ಗಿಡ ಅಥವಾ ಕಬ್ಬುನಾರುಗಳಂತೆ ನೀರಲ್ಲಿ ಕೊಳೆಹಾಕಿ ಸಾಕಷ್ಟು ಕಳಿತಮೇಲೆ ಕಟ್ಟಿಗೆಯಿಂದ ನಾರನ್ನು ಬಿಡಿಸುವರು. ಈ ನಾರಿನಿಂದ ಹುರಿ, ಗೋಣೀತಟ್ಟು, ಹಾಸುವ ಬಣ್ಣದ ತಟ್ಟು, ಕಾಳು ತುಂಬುವ ಚೀಲ, ಹತ್ತಿ ತುಂಬುವ ಪಾಟು ಮುಂತಾದವುಗಳನ್ನು ಮಾಡುತ್ತಾರೆ. ಇವನ್ನು ಪರದೇಶಕ್ಕೆ ಹೆಚ್ಚಾಗಿ ಕಳಿಸುತ್ತಾರೆ.

# ಚಹಾ



ಚಹಾ

ಇದು ಒಂದು ಪ್ರಕಾರದ ಗಿಡದ ತೊಪ್ಪಲು. ಇದರ ಗಿಡವು ಸಾಧಾರಣ ೩ ರಿಂದ ೫ ಫೂಟಿನ ವರೆಗೆ ಎತ್ತರವಿರುವದು. ಇದು ಸಮುದ್ರ ಸಪಾಟಿಯಿಂದ ಸಾಧಾರಣ ೩೦೦೦ ಫೂಟು ಎತ್ತರವಿರುವ ಭೂಮಿಯಲ್ಲಿ ಮಾತ್ರ ಬೆಳೆಯುವದು. ಆದರೆ ಆ ಭೂಮಿಯು ಸಸ್ಯಗಳ ಕೊಳೆತ ಎಲೆಗಳ ಗೊಬ್ಬರಗಳಿಂದ ಕೂಡಿದ್ದು ಕಬ್ಬಿಣದ ಅಂಶವುಳ್ಳದ್ದಾಗಿರಬೇಕು. ಹವೆಯು ಉಷ್ಣವಾಗಿದ್ದು ಆರ್ದ್ರತೆಯಿಂದ ಕೂಡಿರಬೇಕು. ಮಳೆಯು ಹೆಚ್ಚಾಗಿ ಮೇಲಿಂದಮೇಲೆ ಆಗುತ್ತಿದ್ದು ನೀರು ಮಡುಗಟ್ಟಿ ನಿಲ್ಲದಂತಿರಬೇಕು.

ಈ ಅನುಕೂಲತೆಗಳಿರುವ ಆಸಾಮು, ಡಾರ್ಜಿಲಿಂಗ, ಕಾಂಗ್ರಾ ಮತ್ತು ನೀಲಗಿರಿ ಬೆಟ್ಟಗಳ ಓರೆಗಳಲ್ಲಿ ಇದು ಹೆಚ್ಚಾಗಿ ಬೆಳೆಯುವದು ಇದರ ಗಿಡವು ೩-೪ ತಿಂಗಳದ್ದಾದ ಮೇಲೆ ಅದರ ಕುಡಿಗಳನ್ನು ಚಿವುಟಿ ತೆಗೆದು ಒಣಗಿಸಿ ಹದಗೊಳಿಸಿ ಇಡುತ್ತಾರೆ. ಇದೇ ಚಹಾಪುಡಿಯು. ಇಲ್ಲಿಯ ಚಹಾವು ಇತರ ದೇಶಗಳ ಚಹಾಕ್ಕಿಂತ ಮೇಲಾದದ್ದು ಇರುವದರಿಂದ ಇಂಗ್ಲಂಡ ಮೊದಲಾದ ದೇಶದವರು ಇದನ್ನು ಹೆಚ್ಚಾಗಿ ತರಿಸಿಕೊಳ್ಳುತ್ತಾರೆ.

ಎಸರು ಬಂದ ನೀರಿನಲ್ಲಿ ತಕ್ಕಷ್ಟು ಈ ಪುಡಿಯನ್ನು ಹಾಕಿ ಸೋಸಿ ಹಾಲು ಸಕ್ಕರೆಗಳನ್ನು ಕೂಡಿಸಿ ಆ ಪೇಯವನ್ನು ಕುಡಿಯುವರು. ಇದು ಉತ್ತೇಜಕ ಪೇಯವಾದುದರಿಂದ ಇತ್ತೀಚೆಗೆ ಇದನ್ನು ಅನೇಕರು ಹೆಚ್ಚಾಗಿ

ಇದಕ್ಕೆ ಬೇಕಾಗುವದಿಲ್ಲ. ಆದರೆ ಹವೆಯು ಮಾತ್ರ ಅದಕ್ಕಿಂತ ಹೆಚ್ಚು ಉಷ್ಣವಾದದ್ದಿರಬೇಕು. ಆದ್ದರಿಂದ ಈ ಅನುಕೂಲತೆಗಳಿರುವ ಮೈಸೂರು, ಕೊಡಗು, ನೀಲಗಿರಿ ಮತ್ತು ಕಾರ್ಡಮಮ್ ಬೆಟ್ಟಗಳ ಪ್ರದೇಶದಲ್ಲಿ ಈ ಬೆಳೆಯು ಚನ್ನಾಗಿ ಬರುತ್ತದೆ.

ಇದರ ಬಲಿತ ಕಾಯಿಗಳನ್ನು ತೆಗೆದು ಒಣಗಿಸಿ ಬೀಜಗಳನ್ನು ಬೇರ್ಪಡಿಸುವರು. ತಮಗೆ ಬೇಕಾದಾಗ ಅವುಗಳನ್ನು ತಕ್ಕಷ್ಟು ಹುರಿದು ಪುಡಿ ಮಾಡಿ, ಅದರಿಂದ ಚಹದ ಪೇಯದಂತಹ ಪೇಯವನ್ನು ತಯಾರಿಸಿ ಕುಡಿಯುವರು. ಇದು ಸೌಮ್ಯತರಗತಿಯ ಉತ್ತೇಜಕ ಪೇಯವಾದುದರಿಂದ ಬೇನೆಯವರಿಗೂ ಕೊಡುವದುಂಟು.

## ಅಭ್ಯಾಸನಗಳು

(೧) ಚಹದ ಬೆಳೆಗೆ ಯಾವ ಯಾವ ಅನುಕೂಲತೆಗಳಿರಬೇಕು ?

(೨) ಚಹಾ ಬೆಳೆಯುವ ನಾಡು ಯಾವುದು ?

(೩) ಕಾಫಿ ಬೆಳೆಯುವ ಪ್ರದೇಶವಾವುದು ? ಅದಕ್ಕೆ ಯಾವ ಅನುಕೂಲತೆಗಳಿರಬೇಕು ?

(೪) ಚಹಾ, ಕಾಫಿಗಳ ಸೇವನೆಯಲ್ಲಿ ಯಾವದು ಉತ್ತಮ ? ಯಾಕೆ.

---

# ತೆಂಗು

ಇದು ಮನುಷ್ಯರಿಗೆ ಅತ್ಯಂತ ಉಪಯುಕ್ತ ಪದಾರ್ಥಗಳಲ್ಲಿ ಒಂದಾಗಿದೆ. ಇದರ ಉತ್ಪನ್ನವೂ ಹೆಚ್ಚು. ತೆಂಗಿನ ಬೆಳೆಗೆ ಉಪ್ಪು ಕೂಡಿದ ಉಸುಕಿನ ಭೂಮಿಯೂ ಉಷ್ಣ ಹವೆಯೂ ತಕ್ಕವುಗಳಾಗಿರುತ್ತವೆ. ಆದ್ದರಿಂದ ಈ ಅನುಕೂಲತೆಗಳುಳ್ಳ ಪಶ್ಚಿಮ ಸಮುದ್ರ ದಂಡೆಯ ಪ್ರದೇಶ, ತಿರುವಾಂಕೂರ, ಕೊಚ್ಚಿ, ಮಲೆಯಾಳ ಮತ್ತು ದಕ್ಷಿಣ ಕನ್ನಡ ಮುಂತಾದ ಪ್ರದೇಶಗಳಲ್ಲಿ ಇದನ್ನು ಹೆಚ್ಚಾಗಿ ಬೆಳೆಸುವರು.

ಇದರ ಸಸಿಗಳನ್ನು ತಯಾರಿಸಲು ಚನ್ನಾಗಿ ಬಲಿತ ಕಾಯಿಗಳು ನೆಲಕ್ಕೆ ಬೀಳುವ ಮೊದಲೇ ತಂದು ೪-೫ ವಾರಗಳ ವರೆಗೆ ಒಣಗಲು ಬಿಡುವರು. ತರುವಾಯ ತಂಪಾದ ಸ್ಥಳದಲ್ಲಿ ಇಟ್ಟು ಆರದಂತೆ ಆಗಾಗ್ಗೆ ನೀರು ಚಿಮುಕಿಸುತ್ತಿರುವರು. ಕೆಲವೊಂದು ವಾರಗಳಲ್ಲಿ ಅವುಗಳ ಅಂಕುರಗಳು ಪರಟೆಯ ದೊಡ್ಡ ಕಣ್ಣುಗಳೊಳಗಿಂದ ಹೊರಬೀಳುವವು.

ಈ ಸ್ಥಿತಿಯಲ್ಲಿ ಅವು ಕಾಯಿಗಳೊಳಗಿನ ನೀರನ್ನು ಹೀರಿ ವವು. ಆಗ ಇವುಗಳನ್ನು ನೆಡುವದಕ್ಕಾಗಿ ಮೊದಲೇ ತಯಾರಿಸಿದ ಕುಣಿಗಳಲ್ಲಿ ಮೊಳಕೆಗಳನ್ನು ಮೇಲೆ ಮಾಡಿ ಅವು ಕಾಣುವಂತೆ ಹೂರುವರು. ಮತ್ತು ಪ್ರತಿ ದಿನ ಅವಕ್ಕೆ ನೀರನ್ನು ಹಣಿಸುವರು. ಇದು ಬೆಳೆಯುವಾಗ ಇವರ ತಳದಲ್ಲಿ ವರ್ಷಕ್ಕೆ ಒಮ್ಮೆಯಾದರೂ ಉಪ್ಪನ್ನು ಹಾಕುತ್ತಿರುವರು.



ತೆಂಗು

ಕೆಲವು ದಿನಗಳಾದ ಮೇಲೆ ಅವು ಬೇರು ಬಿಟ್ಟು ನೆಲದಲ್ಲಿ ಇಳಿಯುವವು. ಗಿಡವು ೬೦-೭೦ ಅಡಿ ಎತ್ತರವಾಗಿ ಬೆಳೆಯುವದು. ಇದಕ್ಕೆ ಟೊಂಗೆಗಳಿರುವದಿಲ್ಲ. ಗಿಡದ ಮೇಲ್ಭಾಗದಲ್ಲಿ ಮಾತ್ರ ಉದ್ದವಾದ ಗರಿಗಳಿರುತ್ತವೆ. ೭-೮ ವರ್ಷಗಳಾದ ಮೇಲೆ ಬೊಡ್ಡೆಗೆ ಹೊಂದಿ ಗರಿಗಳ ಸಂದುಗಳಲ್ಲಿ ೪-೬ ಗೊನೆಗಳು ಬಿಡುತ್ತವೆ. ಅವುಗಳಲ್ಲಿ ಒಟ್ಟಿಗೆ ಸುಮಾರು ೨೦೦ ರಿಂದ ೩೦೦ ರರ ವರೆಗೆ ಕಾಯಿಗಳಾಗುತ್ತವೆ ಕಾಯಿಗಳು ಎಳೆಯವಿರುವಾಗ ಅವು ಕೇವಲ ನೀರಿನಿಂದ ತುಂಬಿರುವವು ಆ ನೀರಿಗೆ ಎಳೆನೀರು ಅಥವಾ ಸಿಯಾಳವೆನ್ನುವರು. ಈ ನೀರು ಬಹು ತಂಪಾಗಿದ್ದು ರುಚಿಯಿರುತ್ತದೆ. ಅದರಿಂದ ಬೇಸಿಗೆಯಲ್ಲಿ ಜನರು ಬಹು ಪ್ರೀತಿಯಿಂದ ಕುಡಿಯುವರು. ಆ ನೀರೇ ಬರಬರುತ್ತ ಕೊಬ್ಬರಿಯಾಗಿ ಅದರ ಪ್ರಮಾಣ ಕಡಿಮೆಯಾಗುತ್ತದೆ.

### ಪ್ರಶ್ನೆ

(೧) ತೆಂಗಿನ ಸಸಿಗಳನ್ನು ಮಾಡುವ ರೀತಿಯನ್ನು ವರ್ಣಿಸಿರಿ.
(೨) ತೆಂಗನ್ನು ಹೆಚ್ಚಾಗಿ ಬೆಳೆಸುವ ಪ್ರದೇಶವಾವುದು ? ಏಕೆ ?
(೩) ತೆಂಗಿನ ಗಿಡದ ಪ್ರತಿಯೊಂದು ಭಾಗವನ್ನು ಮನುಷ್ಯನು ಯಾವ ಯಾವ ರೀತಿಯಿಂದ ಉಪಯೋಗಿಸುತ್ತಾನೆ ?

# ರೋಗಗಳೂ ಅವುಗಳನ್ನು ಪ್ರತಿಬಂಧಿಸುವ ಉಪಾಯಗಳೂ.

ಮನುಷ್ಯನ ಶರೀರವು ಯಾವಾಗಲೂ ನಿರೋಗಿಯಾಗಿರುವದು ಕಡಿಮೆ. ಇದಕ್ಕೆ ಅವನು ತನ್ನ ಆಲಸ್ಯ ಅಥವಾ, ಅಜ್ಞಾನದಿಂದ ಆರೋಗ್ಯದ ನಿಯಮಗಳನ್ನು ಪಾಲಿಸದಿರುವದೇ ಕಾರಣವಾಗಿದೆ. ಮನುಷ್ಯನಿಗೆ ಸಣ್ಣ ಪುಟ್ಟ ಬೇನೆಗಳು ಬಂದರೆ ಸರ್ವ ಸಾಧಾರಣ ಉಪಾಯಗಳಿಂದ ಗುಣವಾಗುವವು. ಆದರೆ ದೊಡ್ಡ ದೊಡ್ಡ ಬೇನೆಗಳು ಬಂದರೆ ಅವು ಸಾಧಾರಣ ಉಪಾಯಗಳಿಂದ ಗುಣವಾಗದೆ ಒಮ್ಮೊಮ್ಮೆ ಅವನು ಪ್ರಾಣಕ್ಕೆ ಸಹ ಎರವಾಗುತ್ತಾನೆ. ಅಲ್ಲದೆ ಆ ರೋಗಗಳು ಒಬ್ಬರಿಂದೊಬ್ಬರಿಗೆ ಸೇರುತ್ತ ಎಲ್ಲ ಕಡೆಗೂ ಹಬ್ಬುತ್ತವೆ. ಆದ್ದರಿಂದ ಅವುಗಳಿಂದ ದೂರಿರುವದು, ಮನುಷ್ಯನ ಆದ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಅವುಗಳನ್ನು ಕುರಿತು ವಿಚಾರಿಸುವಾ.

ರೋಗಗಳು ಹುಟ್ಟುವ ಬಗೆ:— ರೋಗಗಳು ಸಾಧಾರಣವಾಗಿ ಸೂಕ್ಷ್ಮವಾದ ಜಂತುಗಳಿಂದ ಹುಟ್ಟುತ್ತವೆ. ಇವುಗಳಿಂದ ಮೈಲೀ ಬೇನೆ, ಮಾರೀಬೇನೆ, ಪ್ಲೇಗು, ಕ್ಷಯ, ಚಳಿಜ್ವರ, ನಾರುಹುಣ್ಣು, ವಿಷಮಜ್ವರ



ಸೂಕ್ಷ್ಮ ಜಂತುಗಳು

ಮುಂತಾದ ಅನೇಕ ರೋಗಗಳು ಬರುತ್ತವೆ. ರೋಗ ಜಂತುಗಳು ಬೇರೆ ಬೇರೆ ಪ್ರಕಾರದವಿರುವವು. ಅವುಗಳನ್ನು ಸೂಕ್ಷ್ಮದರ್ಶಕ ಯಂತ್ರದಿಂದ ಮಾತ್ರ ನೋಡಬಹುದು. ಒಂದು ಸೂಜಿಯ ಮೊನೆಯಷ್ಟು ಸ್ಥಳದಲ್ಲಿ ನೂರಾರು ಜಂತುಗಳು ಇರುತ್ತವೆ.

ಇವು ಕೊಳೆತ ಪದಾರ್ಥ, ಪ್ರಾಣಿಗಳ ಮಲ-ಮೂತ್ರ ಕೊಳಚ
ನೀರು, ಹಳಸಿದ ಅನ್ನ, ಧೂಳಿ ಮುಂತಾದವುಗಳಲ್ಲಿ ಹುಟ್ಟುವವು ಮತ್ತು
ಇವುಗಳ ಸಂತತಿಯು ಅಲ್ಪಾವಕಾಶದಲ್ಲಿಯೇ ಬೆಳೆದು ದೊಡ್ಡದಾಗುವದು.
ಇವು ಮನುಷ್ಯನ ಶರೀರದಲ್ಲಿ (ಅ) ರೋಗಿಯ ಸಂಪರ್ಕದಿಂದ (ಆ) ಶ್ವಾಸ
ದೊಡನೆ (ಇ) ಸೇವಿಸುವ ಆಹಾರ, ನೀರುಗಳ ಸಂಗಡ (ಈ) ಗಾಯಗಳ
ಮುಖಾಂತರ (ಉ) ಮಧ್ಯಸ್ಥಗಾರರಿಂದ ಸೇರಿಕೊಳ್ಳುವವು ಹಾಗು ರಕ್ತ
ದಲ್ಲಿರುವ ಅಪ್ರಕೃತಿ ಹಾಗು ಉಷ್ಣತೆ ಇವುಗಳ ಮೂಲಕ ಅಲ್ಲಿ ತೀವ್ರವಾಗಿ
ಬೆಳೆಯುವವು.

(ಅ) ನಿರೋಗಿ ಮನುಷ್ಯನು ರೋಗಿಯ ಸಂಪರ್ಕ ಮಾಡುವದ
ರಿಂದ ಇವನ ಮೈ ಕೈಗಳಿಗೆ ಅಂಟಿಕೊಂಡಿರುವ ರೋಗ ಜಂತುಗಳು
ಇವನು ಸೇವಿಸುವ ಆಹಾರ-ನೀರುಗಳೊಡನೆ ಶರೀರದಲ್ಲಿ ಸೇರುವವು.

(ಆ) ರೋಗಿಯ ಸುತ್ತಲಿನ ಹವೆಯಲ್ಲಿಯ ಜಂತುಗಳು ನಿರೋಗಿ
ಮನುಷ್ಯನ ಶ್ವಾಸದಾಗುಂಟ ಸೇರುವವು. ಇಲ್ಲವೆ ಕೆಮ್ಮು, ದಮ್ಮು, ವಾಂತಿ
ಇವುಗಳಿಂದ ಹೊರಬಿದ್ದ ಕಫ, ಹೊಲಸುಗಳಲ್ಲಿರುವ ಜಂತುಗಳೂ ಹವೆ
ಯಲ್ಲಿ ಕೂಡಿಕೊಂಡು ಶ್ವಾಸದ ಕೂಡ ಒಳಸೇರುವವು.

(ಇ) ಕೊಳೆತ ಹಣ್ಣು, ಹಳಸಿದ ಅನ್ನ, ಕೆಟ್ಟ ನೀರು ಇವುಗಳನ್ನು
ಸೇವಿಸುವದರಿಂದ ಅವುಗಳಲ್ಲಿರುವ ಜಂತುಗಳೂ ಶರೀರದಲ್ಲಿ ಸೇರುವವು.

(ಈ) ಧೂಳಿಯ ಕಣಗಳ ಮುಖಾಂತರವಾಗಿ ರೋಗಜಂತುಗಳು
ಮನುಷ್ಯನ ಗಾಯಗಳಲ್ಲಿ ಸೇರಿಕೊಂಡು ರೋಗವನ್ನು ಹುಟ್ಟಿಸುತ್ತವೆ.

(ಉ) ನೊಣ, ಗುಂಗಾಡು, ಚಿಕ್ಕಾಡು ಮುಂತಾದವುಗಳು ರೋಗಿ
ಮನುಷ್ಯನನ್ನು ಕಡಿದು, ನಿರೋಗಿ ಮನುಷ್ಯನನ್ನು ಕಚ್ಚುವದರಿಂದ ಇವು
ಗಳ ಶರೀರಗಳ ಮುಖಾಂತರ ಬಂದ ಜಂತುಗಳು ನಿರೋಗಿ ಮನುಷ್ಯನ
ಶರೀರವನ್ನು ಸೇರುವವು.

ಮೇಲೆ ಹೇಳಿದ ಯಾವದೇ ಕಾರಣದಿಂದ ಈ ಜಂತುಗಳು ಸಶಕ್ತ
ಮನುಷ್ಯನ ದೇಹದಲ್ಲಿ ಸೇರಿದಮೇಲೆ ಸ್ವಾಭಾವಿಕವಾಗಿ ಇವನ ರಕ್ತದಲ್ಲಿ
ರುವ ಬಿಳಿಯ ಗೋಲಿಕೆಗಳು ಇವುಗಳನ್ನು ಬೆಳೆಯಗೊಡದೆ ನಾಶಮಾಡಿ
ಬಿಡುವವು. ಆದರಿಂದ ಇವನಿಗೆ ಬೇನೆಯು ಬರಲಾರದು. ಒಂದುವೇಳೆ
ಅಶಕ್ತ ಮನುಷ್ಯನಲ್ಲಿ ಸೇರಿದರೆ ಇವನಲ್ಲಿರುವ ಬಿಳಿಯ ಗೋಲಿಕೆಗಳು

ದುರ್ಬಲವಿರುವದರಿಂದ ಈ ಜಂತುಗಳು ನಾಶವಾಗದೆ ತೀವ್ರವಾಗಿ ಬೆಳೆದು ಅವುಗಳಿಂದುಂಟಾಗುವ ಒಂದು ತರದ ವಿಷಪದಾರ್ಥದಿಂದ ಮನುಷ್ಯನಿಗೆ ಬೇನೆ ಬರುತ್ತದೆ. ಆದ್ದರಿಂದ ನಿರೋಗಿಯಾಗಿರುವದಕ್ಕಾಗಿ ಪ್ರತಿಯೊಬ್ಬನು ಕೆಳಗಿನ ನಿಯಮಗಳನ್ನು ಪಾಲಿಸುವದು ಒಳ್ಳೇದು.

(೧) ಮನುಷ್ಯನು ತನ್ನ ಶರೀರ ಹಾಗು ಬಟ್ಟೆಗಳನ್ನು ಸ್ವಚ್ಛವಾಗಿಟ್ಟು ಕೊಳ್ಳಬೇಕು.

(೨) ಅವನ ವಾಸಸ್ಥಳ ಹಾಗು ಸುತ್ತುಮುತ್ತಲಿನ ಸ್ಥಳ ನಿರ್ಮಲ ವಾಗಿರಬೇಕು.

(೩) ಪೌಷ್ಟಿಕ ಆಹಾರವನ್ನು ವೇಳೆಗೆ ಸರಿಯಾಗಿ ಮಿತಿಯಿಂದ ಸೇವಿಸುತ್ತಿರಬೇಕು. ಮತ್ತು ಶುದ್ಧವಾದ ನೀರನ್ನು ಕುಡಿಯಬೇಕು.

(೪) ದಿನಾಲು ತನಗೆ ಒಗ್ಗುವಷ್ಟು ವ್ಯಾಯಾಮವನ್ನು ಮಾಡುತ್ತಿರ ಬೇಕು.

(೫) ಸ್ವಚ್ಛ ಹವೆಯಲ್ಲಿ ಅಡ್ಡಾಡುತ್ತಿರಬೇಕು.

(೬) ನಿದ್ದೆಗೆಡಬಾರದು.

(೭) ವಿಶೇಷ ಮಾನಸಿಕ ಶ್ರಮವಾಗದಂತಿರಬೇಕು. ಹಾಗು ದೇಹ ವನ್ನು ದುರ್ಬಲಗೊಳಿಸುವ ಚಟಗಳಿಂದ ದೂರ ಇರಬೇಕು.

ಮೇಲ್ಕಂಡ ಆರೋಗ್ಯದ ನಿಯಮಗಳಂತೆ ನಡೆದರೂ ನಿರೋಗಿ ಮನುಷ್ಯನಿಗೆ ಒಮ್ಮೊಮ್ಮೆ ಈ ರೋಗಗಳು ಬರುವದುಂಟು. ಆದ್ದರಿಂದ ಈ ರೋಗಗಳ ಲಕ್ಷಣ, ಹಾಗು ಅವುಗಳ ನಿವಾರಣೋಪಾಯಗಳನ್ನು ಕ್ರಮವಾಗಿ ಕೆಳಗೆ ಕೊಡಲಾಗಿದೆ.

## ಅಭ್ಯಸನಗಳು

(೧) ಮನುಷ್ಯನಿಗೆ ಬೇನೆಯು ಬಾರದಂತೆ ಅವನು ಪಾಲಿಸಬೇಕಾದ ಆರೋಗ್ಯದ ನಿಯಮಗಳಾವವು ?

(೨) ಬೇನೆಗಳನ್ನು ಹಬ್ಬಿಸುವ ಮಧ್ಯಸ್ಥಗಾರರು ಯಾರು ?

(೩) ನಮ್ಮ ಶರೀರದಲ್ಲಿ ಸೇರಿಕೊಂಡ ರೋಗಜಂತುಗಳನ್ನು ನಾಶಪಡಿಸಲು ಯಾವ ತರದ ವ್ಯವಸ್ಥೆಯಿದೆ ?

# ಸೈಲೀಬೇನೆ

ಸೈಲೀ ಬೇನೆಗೆ "ಸಿಡುಬು" ಎಂದೂ ಕರೆಯುವರು. ಇದು ಮನುಷ್ಯನಿಗೆ ಬರುವ ಸಾಂಸರ್ಗಿಕ ರೋಗಗಳಲ್ಲಿ ಒಂದಾಗಿದೆ. ಸೈಲೀ ತೆಗೆಯಿಸಿ ಕೊಳ್ಳದಿದ್ದವರಿಗೆ ಈ ಬೇನೆಯು ಬರುವದು ಹೆಚ್ಚು. ಅವರಲ್ಲಿ ಕೆಲವರು ಸಾಯುವದೂ ಉಂಟು. ಉಳಿದವರ ಮುಖ ಹಾಗು ಶರೀರದಲ್ಲಿ ಸೈಲೀ ಕಲೆಗಳುಳ್ಳದ್ದಾಗಿ ಅವರು ಕುರೂಪಿಗಳಾಗುತ್ತಾರೆ. ಕೆಲ ಕೆಲವರ ಕಣ್ಣುಗಳು ಹೋಗುವವು.



ಸೈಲೀ ಎದ್ದ ಬೇನೆ

**ಬೇನೆಯ ಲಕ್ಷಣಗಳು:—** ಆರಂಭದಲ್ಲಿ ಚಳಿ ಹತ್ತುವದು. ತಲೆ, ಬೆನ್ನುಗಳು ನೋಯ ಹತ್ತುವವು. ಆಮೇಲೆ ೧೦೩° ಅಥವಾ ೧೦೪° ದ ವರೆಗೆ ಜ್ವರ ಬರುವವು. ಮುಂದೆ ೨-೩ ದಿನಗಳಲ್ಲಿ ಜ್ವರವು ಇಳಿದು ಕಣ್ಣು, ಕಿವಿ, ನಾಲಗೆ ಮುಂತಾದ ಶರೀರದ ಎಲ್ಲ ಭಾಗಗಳಲ್ಲಿಯೂ ಕೀವಿನಿಂದ ತುಂಬಿದ ಗುಳ್ಳೆಗಳೇಳುವವು.

**ಚಿಕಿತ್ಸೆ:—** ಇದಕ್ಕೆ ಯೋಗ್ಯವಾದ ಔಷಧವು ಯಾವುದೂ ಇಲ್ಲ. ಈ ಬೇನೆ ಬಂದ ಮನುಷ್ಯನನ್ನು ದವಾಖಾನೆಯಲ್ಲಿಡುವದು ಯೋಗ್ಯವು. ಆದರೆ ಮನೆಯಲ್ಲಿಯೇ ಆರೈಕೆ ಮಾಡುವದಾದಲ್ಲಿ ಅವನನ್ನು ಹಾಸಿಗೆಯ ಮೇಲೆ ಸುಮ್ಮನೆ ಮಲಗಿಸಿಬಿಡಬೇಕು. ಅಲ್ಲಿ ಸ್ವಚ್ಛವಾದ ಗಾಳಿಯು ಬೀಸುತ್ತಿರಬೇಕು. ಕುಡಿಯಲಿಕ್ಕೆ ಕುದಿಸಿ ಆರಿಸಿದ ನೀರನ್ನೇ ಕೊಡಬೇಕು. ಹಾಗು ಅವನಿಗೆ ಚಹಾ, ಕಾಫಿ, ಗಂಜಿ, ಹಾಲು ಮುಂತಾದ ತಿಳುವಾದ ಆಹಾರನನ್ನೇ ಕೊಡಬೇಕು. ಪ್ರತಿದಿನ ಜುಲಾಬು ಆಗುವಂತೆ ವ್ಯವಸ್ಥೆ ಮಾಡಬೇಕು. ಜ್ವರ ಹೆಚ್ಚಾಗಿದ್ದರೆ ತಣ್ಣೀರಲ್ಲಿ ಎದ್ದಿದ ಸ್ಪಂಜದಿಂದ ಮೈಯನ್ನು ಒರೆಸುತ್ತಿರಬೇಕು. ಬೋರಿಕ್ ಆಸಿಡ್ ಕೂಡಿಸಿದ ನೀರಿನಿಂದ ಕಣ್ಣು ರೆಪ್ಪೆಗಳನ್ನು ತೊಳೆಯುತ್ತಿರಬೇಕು. ಬಾಯಿಯನ್ನು ತೊಳೆದು ಇಲ್ಲವೆ ನೀರು ಮುಕ್ಕಳಿಸಿ ಸ್ವಚ್ಛವಾಗಿಡಬೇಕು. ಹುಣ್ಣಿನ ಹಕ್ಕಳೆಗಳು

ಬೊಕ್ಕೆ ಅವುಗಳಿಂದ ಕ್ರಿಮಿಗಳು ಹೊರಬಿದ್ದು ಈ ರೋಗವನ್ನು ಹಬ್ಬಿಸುವದರಿಂದ ಅಂಥ ಹಕ್ಕಳಿಗಳನ್ನು ನೆಲದಲ್ಲಿ ಹುಗಿಯುತ್ತಿರಬೇಕು. ರೋಗಿಯ ಬಟ್ಟೆಹಾಸಿಗೆಗಳನ್ನು ನೀರಲ್ಲಿ ಕುದಿಸಿ ಒಗೆದು ಸ್ವಚ್ಛ ಮಾಡಬೇಕು. ಅಂದರೆ ರೋಗಜಂತುಗಳು ನಾಶವಾಗುವವು. ಈ ಉಪಾಯಗಳಿಂದ ಬೇನೆಯು ಕ್ರಮೇಣ ಕಡಿಮೆಯಾಗುವದು.



ಮೈಲೀ ತೆಗೆಯುವದು

**ರೋಗಪ್ರತಿಬಂಧಕ ಉಪಾಯ:—** ಕೂಸು ಹುಟ್ಟಿದ ೬-೭ ತಿಂಗಳೊಳಗಾಗಿ ಮೈಲೀ ತೆಗೆಯಿಸಬೇಕು. ಮುಂದೆ ೧೦ನೆಯ ವರ್ಷದಲ್ಲಿ ಪುನಃ ತೆಗೆಯಿಸಬೇಕು. ಅಂದರೆ ಈ ಬೇನೆಯು ಬರುವ ಸಂಭವ ಕಡಿಮೆ. ಒಮ್ಮೆ ಮೈಲಿ ಎದ್ದ ಮನುಷ್ಯನಿಗೆ ಅವನ ಜೀವಮಾನದಲ್ಲಿ ಪುನಃ ಈ ಬೇನೆಯು ಬರಲಾರದು, ಅವನಿಗೆ ಮೈಲೀ ತೆಗೆಸುವ ಅವಶ್ಯಕತೆಯೂ ಇಲ್ಲ.

(೧) ಕೂಸುಗಳಿಗೆ ಮೈಲಿ ಚುಚ್ಚಿಸುವ ಕಾರಣವೇನು?
(೨) ಮೈಲಿ ಎದ್ದ ಮನುಷ್ಯನಿಗೆ ಎಂಥ ಆಹಾರವನ್ನು ಕೊಡಬೇಕು? ಯಾಕೆ?
(೩) ಮೈಲಿಯು ಸಾಂಸರ್ಗಿಕ ರೋಗವೆಂಬದನ್ನು ಸಿದ್ಧಮಾಡಿರಿ.
(೪) ಬಿಟ್ಟ ಶಬ್ದಗಳನ್ನು ತಯಾರಿಸಿರಿ.
ಅ ಜ್ವರವು ಹೆಚ್ಚಾಗಿದ್ದರೆ.......ಎದ್ದಿದ....... ಮೈಲಿಯನ್ನು ಒರಿಸಬೇಕು.
ಆ ಪ್ರತಿದಿನ.......ಆಗುವಂತೆ ವ್ಯವಸ್ಥೆ ಮಾಡಬೇಕು.

# ಚಳಿಜ್ವರ

ನಮ್ಮ ಭಾರತದಲ್ಲಿ ಪ್ರತಿವರುಷ ಲಕ್ಷಾವಧಿ ಜನರು ಈ ಚಳಿಜ್ವರದಿಂದ ಬಳಲುತ್ತಿರುವರು. ಈ ಬೇನೆಯು ಗುಂಗಾಡುಗಳಿಂದ ಪ್ರಸಾರವಾಗುವದು ಇವುಗಳಲ್ಲಿ ಕ್ಯೂಲೆಕ್ಸ (ಸಾದಾ) ಗುಂಗಾಡು, ಅನಾಫೆಲಿಸ್ (ಚಳಿಜ್ವರದ) ಗುಂಗಾಡು ಎಂದು ಎರಡು ಪ್ರಕಾರಗಳಿರುವವು ಇವುಗಳಲ್ಲಿ ಚಳಿಜ್ವರವು ಅನಾಫೆಲಿಸ್ ಗುಂಗಾಡುಗಳಿಂದಲೇ ಪ್ರಸಾರವಾಗುವದು.




ಚಳಿಜ್ವರದ ಪ್ರಸಾರ

ಇವು ಒಂದೆಡೆಗೇ ನೀರು ನಿಂತು ಕೊಳಚಿಯಾಗುವಲ್ಲಿ ಹೆಚ್ಚಾಗಿ ಹುಟ್ಟುವವು. ಮಲೆನಾಡುಗಳಲ್ಲಿ ಇಂಥ ಕೊಳಚಿಗಳು ವಿಶೇಷವಾಗಿರುವದರಿಂದ ಅಲ್ಲಿ ಈ ರೋಗದ ಉಪದ್ರವವು ಹೆಚ್ಚಾಗಿ ಕಂಡು ಬರುವದು.

**ಬೇನೆಯ ಲಕ್ಷಣಗಳು:**-(೧)ಮೊದಲು ಅಂಗಾಲು ತಣ್ಣಗಾಗುವದು.

(೨) ಮೈಯಲ್ಲಿ ನಡುಕ ಹುಟ್ಟುವದು.

(೩) ಮೈ ಬಿಸಿಯಾಗುತ್ತ ಜ್ವರವೇರುವದು.

(೪) ಬೆವರು ಬಂದು ಜ್ವರವು ಇಳಿಯುವದು.

**ಪ್ರಸಾರ :—** ಅನಾಫೆಲಿಸ್ ಗುಂಗಾಡು ಮನುಷ್ಯರ ರಕ್ತ ಕುಡಿದು ಜೀವಿಸುವದು. ಹೆಣ್ಣು ಗುಂಗಾಡು ಚಳಿಜ್ವರದಿಂದ ಬಳಲುವ ಮನುಷ್ಯನ ರಕ್ತವನ್ನು ಹೀರಿಕೊಳ್ಳುವಾಗ ಆ ರೋಗಿಯ ರಕ್ತದಲ್ಲಿರುವ ರೋಗಜಂತು ಗಳು ಆ ಗುಂಗಾಡದ ಹೊಟ್ಟೆಯಲ್ಲಿ ಸೇರುವವು. ಮತ್ತು ಅಲ್ಲಿಯೇ ಬೆಳವಣಿಗೆ ಹೊಂದುವವು. ಅವುಗಳಿಂದ ಗುಂಗಾಡಿಗೆ ಏನೂ ಅಪಾಯ ವಾಗುವದಿಲ್ಲ. ಗುಂಗಾಡು ರಕ್ತವನ್ನು ಹೀರಿಕೊಳ್ಳುವಾಗ ಆ ರಕ್ತವು ಹೊರಗೆ ಬಂದಕೂಡಲೆ ಗಟ್ಟಿಯಾಗಬಾರದೆಂದು ಅದು ತನ್ನ ಜೊಲ್ಲನ್ನು ಸುರಿಸುವದು. ರೋಗ ಜಂತುಗಳುಳ್ಳ ಗುಂಗಾಡು ನಿರೋಗಿಯ ರಕ್ತವನ್ನು ಹೀರಿಕೊಳ್ಳುವಾಗ ಹೀಗೆ ಸುರಿಸುವ ಜೊಲ್ಲಿನೊಡನೆ ಹೊರಬಿದ್ದ ಚಳಿಜ್ವರದ ರೋಗಜಂತುಗಳು ಅವನ ಶರೀರದಲ್ಲಿ ಪ್ರವೇಶಿಸುವವು ಅಲ್ಲಿ ಬೆಳವಣಿಗೆ ಹೊಂದುತ್ತ ಒಂದೆರಡು ವಾರಗಳಲ್ಲಿ ರೋಗವನ್ನುಂಟುಮಾಡುವವು. ಹೀಗೆ ಈ ರೋಗವು ರೋಗಿಯಿಂದ ನಿರೋಗಿಗೆ ಅನಾಫೆಲಿಸ್ ಗುಂಗಾಡುಗಳ ಮುಖಾಂತರ ಪ್ರಸಾರವಾಗುವದು. ಇವು ಹಗಲು ಮನುಷ್ಯರನ್ನು ಕಚ್ಚುವದಿಲ್ಲ. ಸಂಜೆಯಾಗುತ್ತಲೇ ಅವುಗಳ ಹಾವಳಿಯು ಪ್ರಾರಂಭವಾಗುವದು.

**ಆರೈಕೆ:—** (೧) ಗುಂಗಾಡು ರೋಗಿಯನ್ನು ಕಚ್ಚಿ ನಿರೋಗಿಯನ್ನು ಕಚ್ಚದಂತೆ ರೋಗಿಯನ್ನು ಸೊಳ್ಳೆಯ ಪರದೆಯಲ್ಲಿ ಮಲಗಿಸಬೇಕು.

(೨) ನೀರನ್ನು ಮರಳಿಸಿ ಆರಿಸಿ ಕುಡಿಯಲಿಕ್ಕೆ ಕೊಡಬೇಕು.

(೩) ತೆಳ್ಳಗಿನ (ಗಂಜಿಯಂಥ) ಆಹಾರವನ್ನು ಕೊಡಬೇಕು.

(೪) ಶರೀರದಲ್ಲಿ ಸೇರಿದ ರೋಗಜಂತುಗಳನ್ನು ನಾಶಮಾಡಲು **'ಕ್ವಿನಾಯಿನ್'** ಎಂಬ ಔಷಧವನ್ನು ಕೊಡಬೇಕು. ಪ್ರತಿದಿನ ಸರತಿಗೊಮ್ಮೆ ೧ ಗ್ರೇನಿನಂತೆ (ಕಡಲೆಯ ಕಾಳಿನಷ್ಟು) ೩ ಸಲ ಕೊಡಬೇಕು.

**ಪ್ರತಿಬಂಧಕ ಉಪಾಯ:—** (೧) ಮನೆಯ ಸುತ್ತುಮುತ್ತು ನೀರು ನಿಂತು ಕೊಳಚಿಯಾಗದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಕೊಳಚಿ ಯಿದ್ದರೆ ಅದರ ಮೇಲೆ ವಾರಕ್ಕೆ ಎರಡು ಸಲ ಚಿಮಣಿ ಎಣ್ಣೆಯನ್ನು ಹಾಕ ಬೇಕು. ಅಂದರೆ ಆ ಎಣ್ಣೆಯು ನೀರ ಮೇಲೆ ಹರಡಿಕೊಳ್ಳುವದರಿಂದ ಒಳಗಿದ್ದ ಗುಂಗಾಡುಗಳು ಉಸಿರುಕಟ್ಟಿ ಸಾಯುವವು. ಚಿಮಣೀ ಎಣ್ಣೆಯ ಕೂಡ ಸಾಬಾಣವನ್ನು ಬೆರೆಸುವದು ಒಳ್ಳೇದು.

(೨) ಮಳೆಗಾಲದಲ್ಲಿ ೧೫ ದಿನಕ್ಕೊಮ್ಮೆ ತುಸು ತುಸು ಕ್ವಿನಾಯಿನ್ ಸೇವಿಸುತ್ತಿರಬೇಕು. ಮತ್ತು ನೆಲವನ್ನು ಫಿನಾಯಿಲ್ ಕೂಡಿದ ಸಗಣಿಯಿಂದ ಸಾರಿಸುತ್ತಿರಬೇಕು.

ಚಳಿಜ್ವರದಲ್ಲಿ ಪ್ರತಿದಿನ ಬರುವ ಜ್ವರ, ದಿನಬಿಟ್ಟು ದಿನ ಬರುವ ಜ್ವರ ನಾಲ್ಕು ದಿನಕ್ಕೊಮ್ಮೆ ಬರುವ ಜ್ವರ ಹೀಗೆ ಬೇರೆ ಬೇರೆ ಪ್ರಕಾರಗಳುಂಟು.

### ಅಭ್ಯಸನಗಳು

(೧) ಚಳಿಜ್ವರದ ಲಕ್ಷಣಗಳಾವವು ?

(೨) ಅನಾಫೆಲಿಸ್ ಗುಂಗಾಡು ಈ ಬೇನೆಯನ್ನು ಹೇಗೆ ಹಬ್ಬಿಸುತ್ತವೆ?

(೩) ಗುಂಗಾಡುಗಳನ್ನು ನಾಶ ಮಾಡುವ ಉಪಾಯಗಳೇನು ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ಶರೀರದಲ್ಲಿ ಸೇರಿದ..........ನಾಶ ಮಾಡಲು.........ಔಷಧವನ್ನು ಕೊಡಬೇಕು.

ಬ. ಮಲೆನಾಡುಗಳಲ್ಲಿ.........ಈ ರೋಗದ.........ಬಹಳವಾಗಿ ಕಂಡು ಬರುವದು.

## ಮಾರಿಕಾ (ಕಾಲರಾ) ಬೇನೆ

ಈ ಬೇನೆಯು 'ಕೋಮಾ' ಎಂಬ ರೋಗ ಜಂತುಗಳಿಂದ ಹುಟ್ಟುವದು. ಇವು ನೀರು ಹಾಗು ಹಾಲುಗಳಲ್ಲಿ ಬಹು ತೀವ್ರವಾಗಿ ಬೆಳವಣಿಗೆ ಹೊಂದುವವು. ಈ ರೋಗವು ಜನವಟ್ಟಣೆ ಹೆಚ್ಚಾಗುವ ಸಂದರ್ಭಗಳಲ್ಲಿ ಅಂದರೆ ಜಾತ್ರೆ, ಉರುಸು, ಪರಸಿ ಮುಂತಾದವು ನೆರೆಯುವ ಕಾಲದಲ್ಲಿ ಬಹು ಬೇಗ ಪ್ರಸಾರವಾಗುವದು.

**ಲಕ್ಷಣಗಳು:**— (೧) ಭೇದಿಯಾಗುವದು.

(೨) ಭೇದಿಯು ಹೆಚ್ಚಾಗುತ್ತ ಮಲವು ಜರಜರುತ್ತ ಅಕ್ಕಿಯ ಗಂಜಿಯಂತೆ ತೆಳ್ಳಗಾಗುವದು.

(೩) ಮೂತ್ರ ಕಟ್ಟಾಗುವದು.

(೪) ಹೆಚ್ಚಾಗಿ ವಾಂತಿಯಾಗುವದು.

(೫) ಶರೀರದ ಉಷ್ಣತಾ ಮಾನವು ಕಡಿಮೆಯಾಗುತ್ತ ಹೋಗುವದು.

(೬) ಕೈಕಾಲುಗಳ ನರಗಳು ಸೆಳೆದುಕೊಳ್ಳಹತ್ತುವವು (ಒರಟೆ ಬರಹತ್ತುವದು.)

(೭) ನೀರಡಿಕೆ ಹೆಚ್ಚಾಗುವದು.

**ಪ್ರಸಾರ:—** 'ಕೋಲರಾ' ಎಂಬ ರೋಗ ಜಂತುಗಳುಳ್ಳ ನೀರನ್ನು ಕುಡಿಯುವದರಿಂದಾಗಲಿ, ಆ ನೀರಿನಿಂದ ತೊಳೆದ ಹಸಿ ತೊಪ್ಪಲು ಪಲ್ಲೆ ತಿನ್ನುವದರಿಂದಾಗಲಿ ಇಲ್ಲವೆ ಆ ನೀರು ಕೂಡಿದ ಹಾಲನ್ನು ಸೇವಿಸುವದರಿಂದಾಗಲಿ ಆ ರೋಗ ಜಂತುಗಳು ಶರೀರದಲ್ಲಿ ಪ್ರವೇಶಿಸುವವು.

ಈ ರೋಗದಿಂದ ಬಳಲುವ ರೋಗಿಯ ಮಲ, ವಾಂತಿಗಳಲ್ಲಿ ರೋಗ ಜಂತುಗಳಿರುತ್ತವೆ. ರೋಗಿಯನ್ನು ಉಪಚರಿಸುವವರು ಇವುಗಳನ್ನು ಮುಟ್ಟಿದಾಗ ರೋಗಜಂತುಗಳು ಅವರ ಕೈಗಳಿಗೆ ಅಂಟುವವು. ಅವರು ತಮ್ಮ ಕೈಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳದೆ ಹಾಗೆಯೇ ಶುದ್ಧವಾದ ಆಹಾರ ಪದಾರ್ಥ, ನೀರು ಮುಂತಾದವುಗಳನ್ನು ಮುಟ್ಟಿದರೆ ಅವುಗಳಲ್ಲಿ




ಕಾಲರಾ ಬೇನೆಯ ಪ್ರಸಾರ

ರೋಗ ಜಂತುಗಳು ಸೇರಿಕೊಳ್ಳುವವು. ಇದಲ್ಲದೆ ರೋಗಿಯ ಮಲ ವಾಂತಿಗಳ ಮೇಲೆ ಕುಳಿತ ನೊಣಗಳ ಮೈಗೆ ರೋಗಜಂತುಗಳು ಅಂಟಿಕೊಳ್ಳುವವು. ಇಂಥ ನೊಣಗಳು ಹಾರಾಡುತ್ತ ಹೋಗಿ ಬಾಯಿ ತೆರೆದಿಟ್ಟ ಆಹಾರ ಪದಾರ್ಥಗಳ ಮೇಲೆ ಕುಳಿತುಕೊಳ್ಳಲು ಅವುಗಳ ಮೈಗೆ ಅಂಟಿಕೊಂಡ ರೋಗಜಂತುಗಳು ಆ ಆಹಾರ ಪದಾರ್ಥಗಳಲ್ಲಿ ಸೇರುವವು. ಹೀಗೆ ದೋಷಯುಕ್ತವಾದ ಆಹಾರ ಪದಾರ್ಥಗಳನ್ನು ಸೇವಿಸುವ ಇನ್ನುಳಿದ ನಿರೋಗಿಗಳಿಗೂ ಈ ರೋಗವು ಅಂಟಿಕೊಳ್ಳುವದು.

**ಆರೈಕೆ:—** (೧) ರೋಗಿಯ ಮಲ ಹಾಗು ವಾಂತಿಗಳನ್ನು ಕೂಡಲೆ ತೆಗೆದು ಅವುಗಳಲ್ಲಿ ಕ್ರಿಮಿನಾಶಕ ದ್ರವ್ಯಗಳನ್ನು (ಫಿನಾಯಿಲ್ ಮುಂತಾದವು) ಹಾಕಿ ಮನೆಯಿಂದ ದೂರದಲ್ಲಿ ಹುಗಿಯಬೇಕು.

(೨) ರೋಗಿಯನ್ನು ಉಳಿದ ಜನರಿಂದ ಪ್ರತ್ಯೇಕಿಸಬೇಕು.

(೩) ರೋಗಿಗೆ ಮೂತ್ರವಾಗುವಂತೆ ಪ್ರಯತ್ನಿಸಬೇಕು. ಇದಕ್ಕಾಗಿ ಮೂತ್ರಾಶಯವನ್ನು ಉತ್ತೇಜನಗೊಳಿಸುವಂಥ ಚಹಾ ಕಾಫಿ ಮುಂತಾದ ಬಿಸಿಯ ಪೇಯಗಳನ್ನು ಕುಡಿಸಬೇಕು.

(೪) ರೋಗಿಯ ಶರೀರಕ್ಕೆ ಬ್ರಾಂಡಿಯನ್ನು ಹಚ್ಚಿ ತಿಕ್ಕಬೇಕು. ಅಂದರೆ ಶರೀರದ ಉಷ್ಣತೆಯು ಇಳಿಯುವದಿಲ್ಲ.

(೫) ಕೈಕಾಲು ಹಾಗು ಹೊಟ್ಟೆಗಳನ್ನು ಕಾಸುತ್ತಿರಬೇಕು.

(೬) ತಜ್ಞರಾದ ಡಾಕ್ಟರರಿಂದ ಔಷಧ ಕೊಡಿಸಬೇಕು.

(೭) ಕಾದು ಆರಿದ ನೀರಲ್ಲಿ ಲಿಂಬೆಯ ಹಣ್ಣಿನ ರಸ ಕುಡಿಸಿಕೊಡಬೇಕು.

(೮) ಮಲಗಿದ ರೋಗಿಯನ್ನು ಎಬ್ಬಿಸಬಾರದು.

(೯) ಲಿಂಬೆಹಣ್ಣಿನ ರಸದಲ್ಲಿ 'ಚಕ್ರಾಣೀ ಬೇರನ್ನು ತೆಯ್ದು ಕುಡಿಸಬೇಕು.

**ಪ್ರತಿಬಂಧಕ ಉಪಾಯಗಳು :—** (೧) ಊರಲ್ಲಿ ಮಾರಿಕಾ ಬೇನೆಯು ಪ್ರಾರಂಭವಾಗುವ ಲಕ್ಷಣಗಳು ಕಂಡುಬಂದರೆ ಎಲ್ಲರೂ ಕುಡಿಯುವ ನೀರನ್ನು ಮರಳಿಸಿ ಸೋಸಿ ಕುಡಿಯಬೇಕು ಕುಡಿಯುವ ನೀರಿನ ಭಾವಿಗಳಲ್ಲಿ 'ಪೊಟ್ಯಾಸಿಯಮ್-ಪರ-ಮ್ಯಾಂಗನೇಟ' ಎಂಬ ಕ್ರಿಮಿನಾಶಕ ಪುಡಿಯನ್ನು ಹಾಕಬೇಕು.

(೨) ತೊಪ್ಪಲು ಪಲ್ಲೆಗಳನ್ನು ತಿನ್ನಬಾರದು. ಹಾಲನ್ನು ಮರಳಿಸಿ ಉಪಯೋಗಿಸಬೇಕು.

(೩) ಬಿಸಿಬಿಸಿ ಆಹಾರ ಪದಾರ್ಥಗಳನ್ನೇ ಸೇವಿಸಬೇಕು.

(೪) ಆಹಾರ ಪದಾರ್ಥಗಳು, ಕುಡಿಯುವ ನೀರು. ಇವುಗಳ ಮೇಲೆ ನೊಣಗಳು ಕೂಡ್ರದಂತೆ ಅವುಗಳನ್ನು ಮುಚ್ಚಿಡಬೇಕು.

(೫) ಮಾರಿಕಾ ಬೇನೆಯನ್ನು ಪ್ರತಿಬಂಧಿಸುವ ಚುಚ್ಚುಮದ್ದನ್ನು ಚುಚ್ಚಿಸಿಕೊಳ್ಳಬೇಕು.

ಒಟ್ಟಿಗೆ ಈ ಬೇನೆಯು ಭಯಂಕರವಾಗಿದ್ದು ಮನುಷ್ಯನನ್ನು ತೀವ್ರ ದುರ್ಬಲನನ್ನಾಗಿ ಮಾಡಿ ಮರಣವನ್ನು ತರುತ್ತದೆ. ಆದ್ದರಿಂದ ಈ ಬೇನೆಯ ಲಕ್ಷಣ ತೋರಿದಾಗ ಎಲ್ಲ ಬಗೆಯಿಂದಲೂ ಜಾಗರೂಕರಾಗಿರುವದು ಹೆಚ್ಚು ಒಳ್ಳೇದು.

## ಅಭ್ಯಸನಗಳು

(೧) ಕಾಲರಾಬೇನೆಯು ಯಾವ ಕ್ರಿಮಿಗಳಿಂದ ಉಂಟಾಗುವದು ?

(೨) ಈ ಬೇನೆಯ ಲಕ್ಷಣಗಳೇನು ?

(೩) ಕಾಲರಾ ಬೇನೆಯ ಪ್ರತಿಬಂಧಕ ಉಪಾಯಗಳು ಆವವು ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ........ಉತ್ತೇಜನಗೊಳಿಸುವಂಥ......ಪೇಯಗಳನ್ನು ಕುಡಿಸಬೇಕು.

ಬ. ಕುಡಿಯುವ.......ಗಳಲ್ಲಿ......ಎಂಬ......ಪುಡಿಯನ್ನು ಹಾಕಬೇಕು.

# ಪ್ಲೇಗು

ಪ್ಲೇಗ ಬೇನೆಯೂ ಮಾರಿಕಾದಂತೆ ಭಯಂಕರವಾದದ್ದು. ಈ ಬೇನೆಯು ಪೆಸ್ಟಿಸ್ ಎಂಬ ರೋಗ ಜಂತುಗಳಿಂದ ಹುಟ್ಟುವದು. ಈ ಬೇನೆಯು ಭಾರತಕ್ಕೆ ಇತ್ತೀಚಿಗೆ ಬಂದುದಾಗಿದೆ. ಹಿಂದೆ ಲಂಡನ್ನ ಪಟ್ಟಣ




ಪ್ಲೇಗಿನ ಪ್ರಸಾರ

ದಲ್ಲಿ ಇದು ಉಗ್ರ ಸ್ವರೂಪವನ್ನು ತಾಳಿ ಅಲ್ಲಿಂದ ನಮ್ಮ ದೇಶಕ್ಕೆ ಬಂದ ಜನರಿಂದ ಇಲ್ಲಿಗೆ ಬಂದಿತೆಂದು ಹೇಳುತ್ತಾರೆ. ಈ ಬೇನೆಯೂ ಒಬ್ಬರಿಂದೊಬ್ಬರಿಗೆ ಬಹು ಬೇಗ ಅಂಟಿಕೊಳ್ಳುವದು.

**ಲಕ್ಷಣಗಳು:—** (೧) ಹೆಚ್ಚು ಜ್ವರ ಬರುವದು.

(೨) ಬಗಲಲ್ಲಿ ಇಲ್ಲವೆ ಗೆಜ್ಜೆಗಳಲ್ಲಿ ಗಂಟುಗಳು ಕಾಣಿಸಿಕೊಳ್ಳುವವು.

**ಪ್ರಸಾರ:—** ಈ ರೋಗವು ಮೊದಲು ಇಲಿಗಳಿಗೆ ಬರುವದು. ಆಗ ಇಲಿಗಳು ಸಾಯುವವು. ಈ ಇಲಿಗಳ ರಕ್ತವನ್ನು ಹೀರುವವಕ್ಕಾಗಿ ಅವುಗಳ ಮೈಯಲ್ಲಿರುವ ಚಿಕ್ಕಾಡುಗಳು ಇಲಿಯು ಸತ್ತಕೂಡಲೆ ಅದನ್ನು ಬಿಟ್ಟು ಬೇರೆ ಕಡೆಗೆ ಹೊರಡುವವು. ಇವುಗಳ ಶರೀರದಲ್ಲಿ ಇಲಿಗಳ ರಕ್ತವಲ್ಲಿದ್ದ ರೋಗಜಂತುಗಳು ಸೇರಿಕೊಂಡಿರುವವು. ಹೀಗೆ ಹೊಟ್ಟೆಯೊಳಗೆ ರೋಗಜಂತುಗಳುಳ್ಳ ಚಿಕ್ಕಾಡುಗಳು ಬೇರೆ ನಿರೋಗಿಯಾದ ಇಲಿಯನ್ನಾಗಲಿ, ಮನುಷ್ಯನನ್ನಾಗಲಿ ಕಚ್ಚಿ ರಕ್ತ ಹೀರುವಾಗ ಆ ಇಲಿಯ ಇಲ್ಲವೆ ಮನುಷ್ಯನ ಶರೀರದಲ್ಲಿ ರೋಗ ಜಂತುಗಳನ್ನು ಬಿಡುವದು. ಈ ಪ್ರಕಾರ ಈ ರೋಗವು ಇಲಿಗಳಿಂದ ಚಿಕ್ಕಾಡುಗಳ ಮುಖಾಂತರ ಮನುಷ್ಯರಿಗೆ ಬರುವದು. ಮನೆಗಳಲ್ಲಿ ಇಲಿಗಳೂ ಚಿಕ್ಕಾಡುಗಳೂ ಹೆಚ್ಚಾಗಿದ್ದಂತೆ ರೋಗದ ಪ್ರಸಾರವೂ ಹೆಚ್ಚಾಗುವದು. ಜನರು ಪ್ರವಾಸ ಮಾಡುವಾಗ ತಮ್ಮೊಡನೆ ತೆಗೆದುಕೊಂಡು ಹೋಗುವ ಸಾಮಾನುಗಳ ಸಂಗಡ ಇಲಿಗಳೂ ಚಿಕ್ಕಾಡುಗಳೂ ಊರಿಂದೂರಿಗೆ ಹೋಗಿ ಅಲ್ಲಿಯೂ ಈ ರೋಗವನ್ನು ಪ್ರಸಾರ ಮಾಡುವವು.

**ಆರೈಕೆ:—** (೧) ರೋಗಿಯನ್ನು ಶುದ್ಧ ಹಾಗು ಸಾಕಷ್ಟು ಹವೆಯಾಡುವ ಕೋಣೆಯಲ್ಲಿ ಪ್ರತ್ಯೇಕಿಸಿ ಇಡಬೇಕು.

ತಜ್ಞರಾದ ಡಾಕ್ಟರರಿಂದ ಔಷಧೋಪಚಾರ ಮಾಡಿಸಬೇಕು.

**ಪ್ರತಿಬಂಧಕ ಉಪಾಯ:—** (೧) ಈ ರೋಗಕ್ಕೆ ಮೂಲಕಾರಣವಾದ ಇಲಿಗಳನ್ನು ನಾಶಪಡಿಸಬೇಕು. ಮನೆಯಲ್ಲಿ ಇಲಿಗಳಾಗದಂತೆ ಎಚ್ಚರಗೊಳ್ಳಬೇಕು.

(೨) ಮನೆಯಲ್ಲಿ ಇಲಿಗಳು ಬೀಳಹತ್ತಿದರೆ (ಸಾಯಹತ್ತಿದರೆ) ಪ್ಲೇಗಿನ ಲಕ್ಷಣವೆಂದು ತಿಳಿದು ಬಿದ್ದ ಇಲಿಗಳ ಮೇಲೆ ಚಿಮಣೀ ಎಣ್ಣೆಯನ್ನು ಹಾಕಿ ಮನೆಯಿಂದ ದೂರದಲ್ಲಿ ಸುಡಬೇಕು.

(೩) ಸತ್ತ ಇಲಿಗಳನ್ನು ಕೈಯಿಂದ ಮುಟ್ಟದೆ ಕಟ್ಟಿಗೆ ಅಥವಾ ಚಿಮುಟಿಗೆಯಿಂದ ಹಿಡಿದು ಹೊರಗೆ ಒಯ್ಯಬೇಕು.

(೪) ಬಲೆಗಳನ್ನಿಟ್ಟು ಇಲಿಗಳನ್ನು ಹಿಡಿದು ನಾಶ ಮಾಡಬೇಕು.

(೫) ಇಲಿಗಳ ಹೋರುಗಳಲ್ಲಿ ಗಂಧಕದ ಹೊಗೆ ಹಾಕಬೇಕು. ಇಲ್ಲವೆ ಸಿಯಾನೋ ಎಂಬ ವಾಯುವನ್ನು ಹೊಡಿಸಬೇಕು

(೬) ಮನೆಯಲ್ಲಿ ಚಿಕ್ಕಾಡುಗಳಾಗದಂತೆ ನೋಡಿಕೊಳ್ಳಬೇಕು. ಅಂದರೆ ಧೂಳಿ, ಕಸಕಡ್ಡಿಗಳಲ್ಲಿ ಚಿಕ್ಕಾಡುಗಳು ಹೆಚ್ಚಾಗುವವದರಿಂದ ಮನೆಯಲ್ಲಿ ಅವು ಉಳಿಯದಂತೆ ಸ್ವಚ್ಛಮಾಡುತ್ತಿರಬೇಕು. ಮತ್ತು ಆಗಾಗ್ಗೆ ನೆಲವನ್ನು ಫಿನಾಯಿಲ್ ಕೂಡಿಸಿದ ಸಗಣಿ ಯಿಂದ ಸಾರಿಸುತ್ತಿರಬೇಕು.

(೭) ಮನೆಯಲ್ಲಿ ಇಲಿಗಳು ಬೀಳಹತ್ತಿದರೆ ಅದನ್ನು ಒಂದೆರಡು ತಿಂಗಳಾದರೂ ಬಿಟ್ಟು ಬಿಡಬೇಕು. ಊರ ಹೊರಗೆ ವಾಸಿಸ ಬೇಕು. ರೋಗದ ಹಾವಳಿಯು ಕಡಿಮೆಯಾದ ಮೇಲೆ ಮನೆಗೆ ಸುಣ್ಣ ಹಚ್ಚಿ ಸಾರಿಸಿ ವಾಸಿಸಬೇಕು.

(೮) ಪ್ಲೇಗ ಬೇನೆಯನ್ನು ಪ್ರತಿಬಂಧಿಸುವ ಚುಚ್ಚು ಮದ್ದನ್ನು ಚುಚ್ಚಿಸಿಕೊಳ್ಳಬೇಕು.

ಈ ಬೇನೆಯಲ್ಲಿ ಗಂಟು ಏಳುವ ಪ್ಲೇಗು, ಗಂಟು ಏಳದೆ ಬರುವ ಪ್ಲೇಗು ಎಂದು ಬೇರೆ ಬೇರೆ ಪ್ರಕಾರಗಳುಂಟು. ಗಂಟು ಏಳದೆ ಬರುವ ಪ್ಲೇಗು ಬಹಳ ಉಗ್ರಸ್ವರೂಪದ್ದಿದ್ದು ೨೪ ಗಂಟೆಗಳಲ್ಲಿ ನಿಶ್ಚಿತವಾಗಿ ಮರಣ ವನ್ನೇ ತರುವದು.

## ಅಭ್ಯಸನಗಳು

(೧) ಪ್ಲೇಗುಗಳಲ್ಲಿ ಪ್ರಕಾರಗಳಾವವು? ಅವುಗಳಲ್ಲಿ ಯಾವದು ಭಯಂಕರ ವಾದದ್ದು ?

(೨) ಈ ರೋಗವನ್ನು ಹಬ್ಬಿಸುವ ಮಧ್ಯಸ್ಥಗಾರರು ಯಾರು ? ಹೇಗೆ ?

(೩) ಹೋರಿನೊಳಗಿರುವ ಇಲಿಗಳನ್ನು ನಾಶಪಡಿಸುವ ಬಗೆ ಯಾವದು ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ಮನೆಯಲ್ಲಿ.........ಸಾಯಹತ್ತಿದ.........ಮನೆಯನ್ನು.........ಮಟ್ಟಿ ಗಾದರೂ ಬಿಡಬೇಕು.

ಬ. ಈ ಬೇನೆಯು...........ಪಟ್ಟಣದಲ್ಲಿ ಉಗ್ರಸ್ವರೂಪವನ್ನು ......ಅಲ್ಲಿಂದ ...........ಕ್ಕೆ ಬಂದಿದೆ.

# ಕ್ಷಯ

ಭಾರತದಲ್ಲಿ ಇತ್ತೀಚೆಗೆ ಕ್ಷಯ ರೋಗದಿಂದ ಬಳಲುವವರ ಸಂಖ್ಯೆಯು ದಿನದಿನಕ್ಕೆ ಹೆಚ್ಚಾಗುತ್ತಿದೆ. ಈ ಬೇನೆ ಬಂದ ಮನುಷ್ಯನು ಒಮ್ಮೆಲೆ ಸಾಯುವದಿಲ್ಲ. ಅವನ ಶರೀರವು ಕ್ರಮೇಣ ಕ್ಷೀಣವಾಗುತ್ತ ಕಡೆಗೆ ಮರಣವು ಬರುವದು. ಮನುಷ್ಯನಿಗೆ ಈ ಬೇನೆಯು ಸೇರಿಕೊಂಡದ್ದು ಉಳಿದ ಬೇನೆಗಳಂತೆ ತೀವ್ರ ಗೊತ್ತಾಗುವದಿಲ್ಲ. ಆದ್ದರಿಂದ ಸಕಾಲಕ್ಕೆ ತಕ್ಕ ಔಷಧೋಪಚಾರವನ್ನು ಮಾಡಲು ಅನುವಾಗುವದಿಲ್ಲ. ಈ ಬೇನೆಯು ಇನ್ನೂ ಪ್ರಾರಂಭಾವಸ್ಥೆಯಲ್ಲಿದ್ದಾಗಲೇ ತಕ್ಕ ಔಷಧ ಕೊಡಿಸಿದರೆ ಗುಣವಾಗುವದು.




ಕ್ಷಯ ರೋಗದ ಪ್ರಸಾರ

**ಲಕ್ಷಣಗಳು:**—(೧) ಶಕ್ತಿಯು ಕ್ಷೀಣವಾಗುವದು. ಮುಖವು ನಿಸ್ತೇಜವಾಗುವದು. ಶರೀರದ ತೂಕವು ಕಡಿಮೆಯಾಗುತ್ತ ಹೋಗುವದು.

(೨) ಸಾಮಾನ್ಯ ಉಪಾಯಗಳಿಂದ ಕಡಿಮೆಯಾಗದಂಥ ಕೆಮ್ಮು ಮತ್ತು ಕಫವು ಬೀಳುತ್ತಿರುವದು. ಕಫದ ಸಂಗಡ ಒಮ್ಮೊಮ್ಮೆ ರಕ್ತವೂ ಬರುವದು.

(೩) ಪ್ರತಿದಿನ ಸಾಯಂಕಾಲಕ್ಕೆ ಜ್ವರ [illegible]ವಾಗುವದು.

(೪) ರಾತ್ರಿಯಲ್ಲಿ ಜ್ವರ [illegible]

ಪ್ರಸಾರ:— ಕ್ಷಯ ರೋಗಿಯು ಉಗುಳಿನೊಡನೆ ಅನೇಕ ರೋಗಜಂ: ಹೊರಗೆ ಬಂದು ಸುತ್ತಲಿನ ಹವೆಯಲ್ಲಿರುವ ಧೂಳೀ ಕಣಗಳ ಮೇಲೆ ಕೂಡವವು. ಇಂಥ ಧೂಳೀ ಕಣಗಳುಳ್ಳ ಹವೆಯನ್ನು ನಿರೋಗಿಯು ಉಸಿರಾಸಿದರೆ ಅವನ ಶ್ವಾಸದಕೂಡ ರೋಗ ಜಂತುಗಳು ಶರೀರದಲ್ಲಿ ಪ್ರವೇಶಿಸುವವು ಅದರಿಂದ ಅವನಿಗೂ ಆ ಬೇನೆಯು ಬರುವದು.

ಕ್ಷಯ ರೋಗಿಯು ಕೆಮ್ಮುವಾಗ ಸಹ ಅವನ ಜೊಲ್ಲು, ಕಫ ಇವುಗಳೊಡನೆಯೂ ರೋಗ ಜಂತುಗಳು ಹೊರಗೆ ಬಂದು ಹವೆಯಲ್ಲಿ ಸೇರಿಕೊಳ್ಳುವವು. ಮೇಲೆ ಹೇಳಿದಂತೆ ಇಂಥ ದೂಷಿತ ಹವೆಯನ್ನು ಉಸಿರಾಡಿಸುವ ನಿರೋಗಿಗೂ ಈ ರೋಗವು ಅಂಟಿಕೊಳ್ಳುವದು.



ಕ್ಷಯ ರೋಗಿಯ ಆರೈಕೆ

ಕ್ಷಯರೋಗಿಯು ಉಪಯೋಗಿಸುವ ಪಾತ್ರೆ, ಅರಿವೆ ಮುಂತಾದವುಗಳನ್ನು ಬೇರೆಯವರು ಉಪಯೋಗಿಸಿದರೆ ಅವುಗಳಿಗೆ ಅಂಟಿಕೊಂಡ ರೋಗ ಜಂತುಗಳು ಆ ನಿರೋಗಿಯ ಶರೀರದಲ್ಲಿ ಸೇರಿಕೊಂಡು ಅವನಿಗೂ ರೋಗವನ್ನುಂಟು ಮಾಡುವವು.

ಕ್ಷಯ ರೋಗವುಳ್ಳ ಎಮ್ಮೆ ಆಕಳುಗಳ [illegible] ಈ ಬೇನೆಯು ಬರುವದುಂಟು.

**ಆರೈಕೆ:—**(೧) ಕ್ಷಯರೋಗಿಯನ್ನು ಉಳಿದವರಿಂದ ಪ್ರತ್ಯೇಕಿಸಬೇಕು.

(೨) ಅವನನ್ನು ಶುದ್ಧ ಹಾಗು ಸಾಕಷ್ಟು ಹವೆಯಾಡುವ ಸ್ಥಳದಲ್ಲಿ ಮಲಗಿಸಬೇಕು.

(೩) ಪೌಷ್ಟಿಕ ಆಹಾರವನ್ನು ಕೊಡುತ್ತಿರಬೇಕು.

(೪) ತಕ್ಕ ಔಷಧೋಪಚಾರ ಮಾಡಿಸಬೇಕು.

**ಪ್ರತಿಬಂಧಕ ಉಪಾಯಗಳು:—** (೧) ಪ್ರತಿಯೊಬ್ಬರೂ ಸಾಕಷ್ಟು ನಿರ್ಮಲವಾದ ಹವೆಯು ದೊರೆಯುವಂಥ ಸ್ಥಳದಲ್ಲಿ ವಾಸಿಸಬೇಕು.

(೨) ಶುದ್ಧ ಹಾಗು ಸತ್ವವುಳ್ಳ ಆಹಾರವನ್ನು ತಕ್ಕೊಳ್ಳುತ್ತಿರಬೇಕು.

(೩) ಒಂದೆಡೆಗೇ ಹೆಚ್ಚು ಜನವಟ್ಟಣೆಯಾಗದಂತೆ ನೋಡಿಕೊಳ್ಳಬೇಕು.

(೪) ಕಂಡಕಂಡಲ್ಲಿ ಉಗುಳಬಾರದು.

(೫) ಕ್ಷಯ ರೋಗಿಗಳೊಡನೆ ಸಂಪರ್ಕ ಮಾಡಿಕೊಳ್ಳಬಾರದು.

(೬) ರೋಗಿಯು ಕೆಮ್ಮುವಾಗ ಬಾಯಿಗೆ ವಸ್ತ್ರವನ್ನು ಹಿಡಿದು ಕೆಮ್ಮಬೇಕು. ಮತ್ತು ಆ ವಸ್ತ್ರವನ್ನು ಕುದಿಸಿ ಒಗೆದು ಸ್ವಚ್ಛ ಮಾಡುತ್ತಿರಬೇಕು.

(೭) ಕಫ ಮುಂತಾದ್ದನ್ನು ಮಣ್ಣಲ್ಲಿ ಮುಚ್ಚಬೇಕು.

ಕ್ಷಯರೋಗವೆಂದರೆ ಕ್ಷೀಣತೆ (ಸವಕಳಿ) ಯಿಂದ ಉಂಟಾಗುವ ರೋಗ. ಎಲುವುಗಳಾಗಲಿ, ಫುಪ್ಫುಸಗಳಾಗಲಿ, ರಕ್ತ ಇಲ್ಲವೆ ಕರುಳುಗಳಾಗಲಿ ಕ್ಷೀಣತೆಯನ್ನು ಹೊಂದಬಹುದು. ಹೀಗೆ ಶರೀರದ ಬೇರೆಬೇರೆ ಅವಯವಗಳು ಕ್ಷೀಣತೆಯನ್ನು ಹೊಂದುವದರಿಂದ ಬೇರೆಬೇರೆ ಪ್ರಕಾರದ ಕ್ಷಯರೋಗಗಳು ಬರುವವು.

## ಅಭ್ಯಸನಗಳು

(೧) ಕ್ಷಯರೋಗವುಳ್ಳ ಮನುಷ್ಯನ ಲಕ್ಷಣಗಳಾವವು ?

(೨) ಈ ರೋಗವು ರೋಗಿಯಿಂದ ಹೇಗೆ ಪ್ರಸಾರವಾಗುವದು ?

(೩) ಈ ಬೇನೆಗೆ ಈ ಹೆಸರು ಬರಲು ಕಾರಣವೇನು ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ ........ಹಾಲನ್ನು ಸೇವಿಸುವದರಿಂದ........ಬರುವದು.

ಬ ........ಬಾಯಿಗೆ......ಹಿಡಿದು ಕೆಮ್ಮಬೇಕು.

# ನಾರು ಹುಣ್ಣು

ಕಾಲರಾ, ಪ್ಲೇಗು ಮುಂತಾದ ಸಾಂಸರ್ಗಿಕ ರೋಗಗಳಂತೆ ಈ ನಾರು ಹುಣ್ಣಿನ ಬೇನೆಯಿಂದ ಮನುಷ್ಯ ಸಾಯುವದಿಲ್ಲ. ಆದರೆ ಆರೋಗ್ಯವು ಮಾತ್ರ




ನಾರು ಹುಣ್ಣಿನ ಪ್ರಸಾರ

ಕೆಡುವದು. ಈ ಬೇನೆಯು ಸಾಮಾನ್ಯವಾಗಿ ಹೊಕ್ಕು ತುಂಬುವ ಬಾವಿ, ಕೆರೆ ಹೊಂಡಗಳ ನೀರನ್ನು ಕುಡಿಯಲು ಉಪಯೋಗಿಸುವ ಹಳ್ಳಿಗಳಲ್ಲಿ ಮಾತ್ರ ಹೆಚ್ಚಾಗಿ ಕಂಡು ಬರುವದು. ಇದು ಹೆಚ್ಚಾಗಿ ಬೇಸಿಗೆ ಕಾಲದಲ್ಲಿ ಬರುತ್ತದೆ.

**ಲಕ್ಷಣಗಳು:—** (೧) ಮನುಷ್ಯನಿಗೆ ಪಿತ್ತದ ವಿಕಾರವಾದಂತಾಗಿ ಮೈ ತುರಿಸಹತ್ತುತ್ತದೆ. ಮೈಮೇಲೆ ಗಾದರಿಗಳೇಳುವವು. ಮೈ ಉರಿಯುವದು. ಕೈಕಾಲು ಹಿಮ್ಮಡಗಳನ್ನು ಹೆಚ್ಚು ತುರಿಸುವಂತೆ ಆಗುವದು.

(೨) ತಿಂಡಿಬಿಟ್ಟ ಸ್ಥಳದಲ್ಲಿ ತುರಿಸಿದರೆ ಅಲ್ಲಿ ಬಿಳಿಯ ಬೊಕ್ಕೆ ಯೇಳುವದು.

(೩) ಆ ಬೊಕ್ಕೆಯು ಹುಣ್ಣಿನಂತಾಗಿ ಸುತ್ತಲಿನ ಭಾಗವೆಲ್ಲ ಬಾಯುವದು.

(೪) ಹುಣ್ಣಿನೊಳಗೆ ಮಾರ್ಗ ಮಾಡಿಕೊಂಡು ದಾರದಂಥ ಜಂತುವು (ನಾರು) ಹೊರಬೀಳುವದು.

**ಪ್ರಸಾರ:—** ನಾರು ಹುಣ್ಣಿನ ಬೇನೆಯಿಂದ ಬಳಲುವ ರೋಗಿಯು ಹೊಕ್ಕುತುಂಬುವ ಭಾವಿ, ಕೆರೆ, ಹೊಂಡ ಮುಂತಾದ ಜಲಾಶಯಗಳಲ್ಲಿ

ಇಳಿಯಲು ಅವನ ಹುಣ್ಣಿನಿಂದ ಒಂದು ತರದ ರಸವು ಹೊರಬೀಳುವದು. ಆ ರಸವು ಹೊರಬೀಳುವಾಗ ಅದರೊಡನೆ ಅಸಂಖ್ಯ ಜಂತುಗಳೂ ಹೊರಬೀಳು ವವು. ( ಹುಣ್ಣಿಗೆ ತಣ್ಣೀರು ಹತ್ತಿದೊಡನೆಯೇ ಅದರಿಂದ ರಸವು ಹೊರಗೆ ಬರುವದು. ) ಹೀಗೆ ರಸದ ಕೂಡ ಹೊರಬಿದ್ದ ರೋಗ ಜಂತುಗಳು ಆ ಭಾವಿ, ಹೊಂಡ ಮುಂತಾದವುಗಳ ನೀರಲ್ಲಿ ಹರಡಿಕೊಳ್ಳುವವು. ಇವುಗಳನ್ನು ನೀರಿ ನಲ್ಲಿದ್ದ 'ಸಾಯಕ್ಲಾಫ್' ಎಂಬ ಕ್ರಿಮಿಗಳು ತಿನ್ನುವವು. ಇಂಥ ಸಾಯಕ್ಲಾಫ್ ಗಳುಳ್ಳ ನೀರನ್ನು ಜನರು ನಿರೋಗಿಗಳು ಕುಡಿಯಲು ಅವು ಅವರ ಹೊಟ್ಟೆಯಲ್ಲಿ ಸೇರಿ ಅವು ಅಲ್ಲಿ ಸತ್ತು ಹೋಗುವವು. ಆಗ ಆ ಸಾಯಕ್ಲಾಫ್‌ಗಳ ಹೊಟ್ಟೆಯಲ್ಲಿದ್ದ ನಾರ ಜಂತುಗಳು ಸಾಯದೆ ಬೆಳವಣಿಗೆ ಹೊಂದಿ ಆ ಮನುಷ್ಯನಿಗೆ ಬೇನೆಯ ನ್ನುಂಟು ಮಾಡುವವು. ಈ ಪ್ರಕಾರ ನೀರಿನ ಮುಖಾಂತರ ಈ ಬೇನೆಯು ಪ್ರಸಾರವಾಗುವದು.

**ಆರೈಕೆ :—** (೧) ಹುಣ್ಣಿನ ಮೇಲೆ ದಿನಾಲು ತಣ್ಣೀರು ಹಾಕುತ್ತಿರ ಬೇಕು.



ನಾರು ತೆಗೆಯುವದು

(೨) ತಣ್ಣೀರಿನ ಪಟ್ಟೀ ಕಟ್ಟಬೇಕು. ಇಲ್ಲವೆ ಲೌಳಸರದ ತಿಳಲನ್ನು ಹಾಕಿ ಪಟ್ಟಿ ಕಟ್ಟಬೇಕು

(೩) ದಿನಾಲು ಮೃದುವಾದ ಕೋಳಿಯ ಪುಚ್ಚದಿಂದ ತೊಳೆಯುತ್ತಿರಬೇಕು.

(೪) ಹುಣ್ಣಿನಿಂದ ಹೊರಬಿದ್ದ ನಾರನ್ನು ಕಡ್ಡಿ ಅಥವಾ ಅರಳೆಯ ಗುಂಜಗೆ ಸಾವ ಕಾಶವಾಗಿ ಸುತ್ತುತ್ತ ಹೋಗಬೇಕು. ಸುತ್ತು ವಾಗ ಅದು ನಡುವೆ ಕತ್ತರಿಸದಂತೆ ಎಚ್ಚ ರಿಕೆಯಿಂದಿರಬೇಕು. ಈ ಜಂತುವು (ನಾರು) ಸುಮಾರು ೨–೩ ಫೂಟು ಉದ್ದವಿರುವದು. ಆದ್ದರಿಂದ ಅದು ಪೂರಾ ಹೊರ ಬೀಳುವವರೆಗೂ ಸುತ್ತುತ್ತಿರಬೇಕು.

ಒಂದು ವೇಳೆ ನಾರು ಹರಿದರೆ ಪುನಃ ಅದು ಮತ್ತೊಂದು ಹುಣ್ಣನ್ನುಂಟು ಮಾಡಿ ಆ ಮಾರ್ಗದಿಂದ ಹೊರಬೀಳುವದು. ಈ ಸ್ಥಿತಿಯಲ್ಲಿ ರೋಗಿಯು ಬಲು ಕಷ್ಟಪಡಬೇಕಾಗುವದು.

(೫) ರೋಗಿಗೆ ಮರಳಿಸಿ ಸೋಸಿದ ನೀರನ್ನೇ ಕುಡಿಯಲು ಕೊಡಬೇಕು.

**ಪ್ರತಿಬಂಧಕ ಉಪಾಯಗಳು :—** (೧) ಹೊಕ್ಕುತುಂಬುವ ಜಲಾಶಯಗಳಲ್ಲಿ ನಾರು ಹುಣ್ಣಿನ ಮನುಷ್ಯನನ್ನು ಇಳಿಯಗೊಡಬಾರದು.

(೨) ಜಲಾಶಯಗಳಲ್ಲಿ ನಾರು ಹುಣ್ಣಿನ ಜಂತುಗಳು ಉಂಟಾಗಿರುವವೆಂದು ಸಂಶಯ ಬಂದರೆ ಆ ನೀರಲ್ಲಿ 'ಪೊಟ್ಯಾಶಿಯಮ್-ಪರ-ಮ್ಯಾಂಗನೇಟ್' ಎಂಬ ಪುಡಿಯನ್ನು ಹಾಕಬೇಕು.

(೩) ಕಾಸಿ ಸೋಸಿದ ನೀರನ್ನು ಕುಡಿಯಲು ಉಪಯೋಗಿಸಬೇಕು.

## ಅಭ್ಯಸನಗಳು

(೧) "ಸಾಯಕ್ಲಾಪ್" ಅಂದರೇನು ? ಅವುಗಳಿಂದ ನಾರು ಬೇನೆಯು ಹೇಗೆ ಹಬ್ಬುವದು ?

(೨) ಈ ಬೇನೆಯು ಬರುವ ಪೂರ್ವ ಸೂಚನೆಗಳು ಯಾವವು ?

(೩) ನಾರನ್ನು ಸುತ್ತುವಾಗ ಹರಿಯಬಾರದು ಯಾಕೆ ?

(೪) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. .........ಜಲಾಶಯಗಳಲ್ಲಿ.........ಮನುಷ್ಯನನ್ನು ಇಳಿಯಗೊಡಬಾರದು.

ಬ. ಹುಣ್ಣಿನ ಮೇಲೆ.........ಪಟ್ಟಿಯನ್ನು ಅಥವಾ .........ತಿರುಳನ್ನು ಕಟ್ಟಬೇಕು.

# ಆರೋಗ್ಯದ ನಿಯಮಗಳು.

ಈ ವರೆಗೆ ನಾವು ಅನೇಕ ಸಾಂಸರ್ಗಿಕ ರೋಗಗಳು ಹುಟ್ಟುವ ಬಗೆ, ಹಬ್ಬುವ ರೀತಿ ಮತ್ತು ಅವುಗಳ ನಿವಾರಣೋಪಾಯ ಮುಂತಾದವುಗಳನ್ನು ಕಲಿತುಕೊಂಡೆವು, ರೋಗವು ಬಂದ ಮೇಲೆ ಅದನ್ನು ನಿವಾರಿಸುವ ಉಪಾಯಗಳನ್ನು ಮಾಡುವದಕ್ಕಿಂತ ರೋಗವು ಬಾರದಂತೆ ಮಾಡುವದೇ ಹೆಚ್ಚು ಮೇಲಾದದ್ದು. ಅದಕ್ಕಾಗಿ ಪ್ರತಿಯೊಬ್ಬನು ಸಾಧ್ಯವಿದ್ದಮಟ್ಟಿಗೆ ಕೆಳಗಿನ ಆರೋಗ್ಯದ ನಿಯಮಗಳನ್ನು ಪಾಲಿಸುವದು ಒಳ್ಳೇದು.

(೧) ದಿನಕ್ಕೆ ಒಂದು ಸಲವಾದರೂ ಸ್ನಾನ ಮಾಡಿ ಶುಭ್ರವಾಗಿರುವ ಒಣಗಿದ ಉರುಟು ಬಟ್ಟೆಯಿಂದ ಮೈ ಒರೆಸಿಕೊಳ್ಳಬೇಕು.

(೨) ಊಟ ಮಾಡುವದಕ್ಕೆ ಮುಂಚೆ ನಿಮ್ಮ ಕೈಗಳನ್ನು ಚೆನ್ನಾಗಿ ತೊಳೆಯಬೇಕು. ಉಗುರು ಸಂದಿನಲ್ಲಿರುವ ಹೊಲಸನ್ನೂ ತೆಗೆದುಹಾಕಬೇಕು.

(೩) ಊಟ ಮಾಡುವದಕ್ಕೆ ಮೊದಲೂ ಊಟವಾದ ಮೇಲೂ ಶುದ್ಧವಾದ ನೀರಿನಿಂದ ಬಾಯಿ ಮುಕ್ಕಳಿಸಬೇಕು.

(೪) ಯಾವಾಗಲೂ ಮೂಗಿನಿಂದಲೇ ಉಸಿರಾಡಿಸಬೇಕು.

(೫) ನಿಮ್ಮ ಆಹಾರವನ್ನು ಚನ್ನಾಗಿ ನುರಿಸಿ ತಿನ್ನಬೇಕು.

(೬) ನಿತ್ಯವೂ ಒಳ್ಳೆಯ ಹಾಲನ್ನು ಕುಡಿಯಬೇಕು. ಇದು ಉತ್ಕೃಷ್ಟವಾದ ಆಹಾರ ವಸ್ತುವು.

(೭) ರಾತ್ರಿ ಮಲಗುವ ಕೋಣೆಯ ಕಿಟಿಕಿ, ಬಾಗಿಲುಗಳನ್ನು ತೆರೆದಿಡಬೇಕು. ಮುಸುಕು ಹಾಕಿಕೊಂಡು ಮಲಗಬಾರದು. ಸಾಧ್ಯವಿದ್ದರೆ ಸೊಳ್ಳೆಯ ಪರದೆಯನ್ನು ಉಪಯೋಗಿಸಬೇಕು.

(೮) ಮೇಲಿಂದ ಮೇಲೆ ಕಂಡಕಂಡಲ್ಲಿ ಉಗುಳಬಾರದು, ಇದು ರೋಗವನ್ನು ಹರಡುವ ಕೆಟ್ಟಪದ್ಧತಿ.

ನೀವು ಕೆಮ್ಮುವಾಗಾಗಲೀ, ಉಗುಳುವಾಗಾಗಲೀ ನಿಮ್ಮ ಮೂಗನ್ನು ಒರೆಸಿಕೊಳ್ಳುವುದಕ್ಕೆ ಕರವಸ್ತ್ರವನ್ನೋ ಸ್ವಚ್ಛವಾದ ಬಟ್ಟೆಯ ಚೂರನ್ನೋ ಅಥವಾ ಕಾಗದವನ್ನೋ ಉಪಯೋಗಿಸಬೇಕು.

(೯) ಶರೀರವನ್ನು ತಿಂಗಳಿಗೆ ಒಂದುಸಲವಾದರೂ ತೂಕ ಮಾಡುತ್ತಿರಬೇಕು. ಇವೇ ಮುಂತಾದವು.

# ಪೋಸ್ಟ ಆಫೀಸಿನ ಕಾರ್ಯಗಳು

ನೀವು ಬೇರೊಂದು ಊರಲ್ಲಿರುವ ನಿಮ್ಮ ಗೆಳೆಯರಿಗಾಗಲೀ, ಆಪ್ತರಿಗಾಗಲಿ ಬರೆದ ಪತ್ರಗಳನ್ನು ಪೋಸ್ಟಿನವರು ಅವರಿಗೆ ಹೇಗೆ ಮುಟ್ಟಿಸುತ್ತಾರೆಂಬವನ್ನು ಈಗಾಗಲೇ ಕೆಲಮಟ್ಟಿಗೆ ಅರಿತುಕೊಂಡಿರುವಿರಿ. ಆದರೆ ಅವರ ಕಾರ್ಯಗಳು ಇಷ್ಟೇ ಅಲ್ಲ. ಇನ್ನೂ ಹಲವಾರು ಇರುತ್ತವೆ. ಅವುಗಳನ್ನು ತಿಳಿದುಕೊಳ್ಳುವ ಮೊದಲು ನಿಮಗೆ ಗೊತ್ತಿದ್ದ ಸಂಗತಿಯನ್ನೇ ಇನ್ನೊಮ್ಮೆ ನೆನಪಿಗೆ ತಂದುಕೊಳ್ಳುವಾ.

**ಪತ್ರಗಳು:**— ನಾವು ಯಾವುದೊಂದು ಸಂಗತಿಯನ್ನು ಬೇರೂರಲ್ಲಿರುವ ಇನ್ನೊಬ್ಬರಿಗೆ ಕಾರ್ಡು, ಅಥವಾ ಪಾಕೀಟದಲ್ಲಿ ಬರೆದು ತಿಳಿಸಬಹುದು.

**ಕಾರ್ಡು:**— ನಾವು ಬರೆಯಬೇಕಾದ ಸಂಗತಿಯನ್ನು ಒಂದು ಮಗ್ಗಲು ಬರೆದು ಅದರ ಇನ್ನೊಂದು ಮಗ್ಗಲಿಗೆ ಗೊತ್ತುಪಡಿಸಿದ ಸ್ಥಳದಲ್ಲಿ ಮಾತ್ರ ಅದು ಯಾರಿಗೆ ಮುಟ್ಟಬೇಕಾಗಿದೆಯೋ ಅವರ ಹೆಸರು ಅಡ್ಡಹೆಸರು ಊರು ಮುಂತಾದ್ದು ಬರೆದು ಪತ್ರಗಳನ್ನು ಹಾಕುವ ಪೆಟ್ಟಿಗೆಯಲ್ಲಿ ಹಾಕಬೇಕು.

**ಪಾಕೀಟು:**— ಒಂದು ಕಾಗದದಲ್ಲಿ ಬರೆಯತಕ್ಕ ಎಲ್ಲ ಸಂಗತಿಯನ್ನು ಬರೆದು ಪಾಕೀಟದಲ್ಲಿ ಹಾಕಿ ಬಾಯಿ ಬಂದು ಮಾಡಿ ಅದರ ಮೇಲೆಯೂ ವಿಳಾಸ ಮುಂತಾದ್ದು ಬರೆದು ಹಾಕಬೇಕು. ಇತ್ತೀಚೆಗೆ ಪಾಕೀಟನ್ನು ಹೋಲುವಂಥ "ಅಂತರ್ದೇಶೀಯ" ಪತ್ರಗಳು ಬಳಕೆಯಲ್ಲಿ ಬಂದಿವೆ ಅವುಗಳನ್ನು ಬರೆದು ಮಡಿಚಲು ಬರುವಂತಿರುತ್ತವೆ.

ಇವೆಲ್ಲವುಗಳನ್ನು ಪೋಸ್ಟಿನಲ್ಲಿ ಬೆಲೆಕೊಟ್ಟುಕೊಳ್ಳಬೇಕಾಗುತ್ತದೆ. ಹಾಗೆ ಮಾಡದೆ ನೀವು ತಿಕೀಟ ಇಲ್ಲದ ಸಾದಾಕಾರ್ಡ ಇಲ್ಲವೆ ಪಾಕೀಟನ್ನು ಬರೆದು ಕಳಿಸಿದರೆ ಪತ್ರ ಸ್ವೀಕರಿಸುವವರಿಂದ ಅದರ ಬೆಲೆಯ ಇಮ್ಮಡಿ ಬೆಲೆಯನ್ನು ವಸೂಲ ತಕ್ಕೊಂಡು ಆ ಪತ್ರ ಕೊಡುವರು. ಅವನು ಪರತ ಬಿಟ್ಟರೆ ತಿರುಗಿ ನಿಮಗೇ ಬರುವದು. ಆಗಲಾದರೂ ನೀವು ಆ ಹಣ ಕೊಡಬೇಕಾಗುತ್ತದೆ. ಅದಕ್ಕೆ ನಾಟ್‌ಪೇಡ ಅನ್ನುವರು.

ನೀವು ಡಬ್ಬಿಯಲ್ಲಿ ಹಾಕಿದ ಪತ್ರಗಳನ್ನು ತಕ್ಕೊಂಡು ಪೋಸ್ಟಿನವರು ಮುದ್ರೆಗಳನ್ನು ಹಾಕಿ ಆಯಾ ಊರುಗಳಲ್ಲಿರುವ ಪೋಸ್ಟಿಗೆ ಕಳಿಸುವರು.

ಅವರೂ ಅವುಗಳ ಮೇಲೆ ತಮ್ಮ ಆಫೀಸ ಮುದ್ರೆಯನ್ನು ಒತ್ತಿ ಪೋಸ್ಟುಮನ್ನ ನಿಂದ ವಿಳಾಸದಾರರಿಗೆ ಮುಟ್ಟಿಸುತ್ತಾರೆ.

ನಾವು ಬರೆದ ಪತ್ರಕ್ಕೆ ತೀವ್ರ ಉತ್ತರ ತರಿಸುವ ಇಚ್ಛೆ ಇದ್ದರೆ ಡಬಲ್ ಕಾರ್ಡನ್ನು (ಎರಡು ಕಾರ್ಡ ಕೂಡಿದ್ದು) ಒರೆಯಬೇಕು. ಇವುಗಳ ಮೇಲ್ಭಾಗದ ಕಾರ್ಡಿನಲ್ಲಿ ತಿಳಿಸುವ ಸಂಗತಿಯನ್ನೂ ಪತ್ರ ಸ್ವೀಕರಿಸುವವನ ವಿಳಾಸವನ್ನೂ ಬರೆಯಬೇಕು. ಕೆಳಗಿನ ಕಾರ್ಡಿನಲ್ಲಿ ನಮ್ಮ ವಿಳಾಸವನ್ನಷ್ಟೇ ಬರೆದು ಅದರ ಎರಡನೇ ಮಗ್ಗಲನ್ನು ಖಾಲೀ ಇಡಬೇಕು.

**ಅತಿ ತೀವ್ರ ಪತ್ರ ಮುಟ್ಟಿಸುವಿಕೆ (ಎಕ್ಸಪ್ರೆಸ್) ಡಿಲೆವ್ಹರಿ :—** ನಾವು ಹಾಕಿದ ಪತ್ರಗಳು ಒಮ್ಮೊಮ್ಮೆ ತಡವಾಗಿ ಮುಟ್ಟುವದೂ ಉಂಟು. ಅವು ತೀವ್ರ ಮುಟ್ಟಬೇಕೆಂದು ಇಚ್ಛಿಸಿದರೆ ಸಾದಾ ಬೆಲೆಯ ಮೇಲೆ ಹೆಚ್ಚಿಗೆ ಎರಡು ಆಣೆಯ ತಿಕೀಟು ಹಚ್ಚಿ ಎಕ್ಸಪ್ರೆಸ್ ಡಿಲಿವ್ಹರಿ ಅಂತ ಬರೆದು ಹಾಕಿದರೆ ಅದನ್ನು ಪೋಸ್ಟಿನವರು ಕೂಡಲೆ ಒಬ್ಬ ಅಂಚೆಯಾಳಿನಿಂದ ಕೊಟ್ಟುಕಳಿಸಿ ವಿಳಾಸದಾರನಿಗೆ ಮುಟ್ಟಸಿ ಅವನ ಸಹಿ ತಕ್ಕೊಳ್ಳುವರು. ಇಂಥ ವ್ಯವಸ್ಥೆಯು ಪೋಸ್ಟ ಆಫೀಸದಿಂದ ೫ ಮೈಲು ಅಂತರದೊಳಗಿನ ಊರುಗಳ ಬಗ್ಗೆ ಮಾತ್ರ ಇರುತ್ತದೆ.

ಎಲ್ಲ ಟಪಾಲುಗಳು ಹೆಚ್ಚಾಗಿ ಉಗಿಬಂಡಿ, ಮೋಟಾರುಗಳಿಂದ ಕಳಿಸಲ್ಪಡುವವು. ಇತ್ತೀಚೆಗೆ ವಿಮಾನಮಾರ್ಗವಾಗಿಯೂ ಟಪಾಲು ಕಳಿಸುವ ವ್ಯವಸ್ಥೆಯಾಗಿದೆ.

**ತಾರು ಅಥವಾ ತಂತೀ ಟಪಾಲು:—** ಪತ್ರಗಳು ವಿಳಾಸದಾರರಿಗೆ ಮುಟ್ಟಲು ಒಂದು ದಿನವಾದರೂ ಬೇಕು. ಆದರೆ ಯಾವದೊಂದು ಸಂಗತಿಯನ್ನು ಇದಕ್ಕೂ ಕಡಿಮೆ ವೇಳೆಯಲ್ಲಿ ಅಂದರೆ ೨-೩ ತಾಸುಗಳಲ್ಲಿಯೇ ಮುಟ್ಟಿಸುವ ಯೋಜನೆಯೊಂದಿದೆ. ಅದೇ ತಂತೀ ಟಪಾಲು. ಇದಕ್ಕೆ ಹತ್ತುವ ವೆಚ್ಚವು ನಾವು ತಿಳಿಸುವ ಸಂಗತಿಯನ್ನು ಬರೆದ ಶಬ್ದಗಳ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಇದರಿಂದ ತಿಳಿಸುವ ಶಬ್ದಗಳು ತೀರ ತುಸು ಇರಬೇಕು. ವಿಳಾಸ ಸಹ ೧ ರಿಂದ ೮ ರ ವರೆಗೆ ಎಷ್ಟೇ ಶಬ್ದಗಳಿದ್ದರೂ ಅದಕ್ಕೆ ೧೨ ಆಣೆ ಬೆಲೆ ಬೀಳುತ್ತದೆ. ೮ ಕ್ಕಿಂತಲೂ ಹೆಚ್ಚಾದ ಪ್ರತಿಯೊಂದು ಶಬ್ದಕ್ಕೂ ಒಂದಾಣೆಯಂತೆ ಹೆಚ್ಚು ಬೆಲೆ ಬೀಳುವದು. ಅಂದರೆ ೧೨ ಶಬ್ದಗಳ

ಸಂಗತಿ ತಿಳಿಸಲು ೧ ರೂ. ಬೀಳುವದು. ಇದಾದರೂ ಕೂಡಲೆ ವಿಳಾಸದಾರನಿಗೆ ಅಂಚೆಯವಳಿನಿಂದ ಮುಟ್ಟಿಸಲ್ಪಡುವದು. ಅದರಲ್ಲಿಯೂ ಅತಿ ಶೀಘ್ರ ಮುಟ್ಟಬೇಕಾಗಿದ್ದರೆ ಎಕ್ಸಪ್ರೆಸ್ ತಾರು ಮಾಡಬೇಕಾಗುತ್ತದೆ. ಇದಕ್ಕೆ ಸಾದಾ ತಾರಿನ ಇಮ್ಮಡಿ ಖರ್ಚು ಬರುವದು.

ಈ ತಂತೀಟಪಾಲನ್ನು ಪೋಸ್ಟ ಆಫೀಸು ಚಾಲೂ ಇರುವ ವೇಳೆಯಲ್ಲಿ ಮಾತ್ರ ಕಳಿಸಬೇಕು. ಅವಧಿ ಮೀರಿ ಕೊಡುವ ತಂತೀಟಪಾಲಿಗೆ ಲೇಟ ಫೀ ಎಂದು ಎರಡು ರೂಪಾಯಿ ಹೆಚ್ಚಿಗೆ ಕೊಡಬೇಕಾಗುತ್ತದೆ.

ಪೋಸ್ಟಿನಿಂದ ಸುದ್ದಿಯನ್ನು ಕಳಿಸುವಂತೆ ಹಣವನ್ನೂ ಕಳಿಸಲು ಬರುತ್ತದೆ. ಅದಕ್ಕೆ ಮನಿಯಾರ್ಡರ ಮಾಡೋಣವೆನ್ನುವರು. ಅದರಲ್ಲಿ ಸಾದಾ ಮನಿಯಾರ್ಡರ, ತಾರಮನಿಯಾರ್ಡರ ಎಂದು ಎರಡು ಪ್ರಕಾರಗಳುಂಟು.

**ಸಾದಾ ಮನಿಆರ್ಡರ:—** ಹಣವನ್ನು ಕಳಿಸುವವನು ಮನಿಆರ್ಡರ ಫಾರ್ಮಿನ ಮೇಲೆ ತನ್ನ ಹಾಗೂ ಹಣ ಸ್ವೀಕರಿಸುವವನ, ವಿಳಾಸ ಊರು ಮುಂತಾದ್ದನ್ನು ಬರೆದು, ಕಳಿಸತಕ್ಕ ಹಣವನ್ನು ಅಕ್ಷರದಿಂದಲೂ ಅಂಕಿಗಳಿಂದಲೂ ಗೊತ್ತು ಮಾಡಿದ ಸ್ಥಳದಲ್ಲಿ ಬರೆಯಬೇಕು. ಮತ್ತು ಕೆಳ ಭಾಗಕ್ಕಿರುವ ಕುಪನ್ ( ಖಾಲೀಜಾಗಾ ) ದಲ್ಲಿ ಹಣ ಸ್ವೀಕರಿಸುವವನಿಗೆ ತಿಳಿಸತಕ್ಕ ಸಂಗತಿಯನ್ನು ಬರೆಯಬೇಕು. ಆ ಮೇಲೆ ಕಳಿಸತಕ್ಕ ಹಣವನ್ನೂ ( ಕಮೀಶನ್ ಸಹಿತ ) ಮನಿಆರ್ಡರ ಫಾರ್ಮನ್ನೂ ಪೋಸ್ಟಿನ ಅಧಿಕಾರಿಗಳ ಕಡೆಗೆ ಕೊಡಬೇಕು. ಅವರು ಹಣ ಮುಟ್ಟಿದ ಬಗ್ಗೆ ಪೋಸ್ಟಿನ ಮುದ್ರೆಯುಳ್ಳ ಪಾವತಿಯನ್ನು ಕೊಡುವರು. ಈ ಹಣವನ್ನು ಪೋಸ್ಟಿನವರು ಯೋಗ್ಯ ಮನುಷ್ಯನಿಗೆ ಮುಟ್ಟಿಸಿ, ಫಾರ್ಮಿನ ಮೇಲೆ ಸಹಿ ತಕ್ಕೊಂಡು ಆ ಪಾವತಿಯನ್ನು ಹಣ ಕಳಿಸಿದವನಿಗೆ ಮುಟ್ಟಿಸುವರು.

ಮನಿಆರ್ಡರದಿಂದ ರೂಪಾಯಿ ಹಾಗು ಅದರ ಭಾಗಗಳಾದ ಆಣೆಗಳನ್ನು ಮಾತ್ರ ಕಳಿಸಬಹುದು. ಈ ಹಣವು ೬೦೦ಕ್ಕೆ ಮಿಕ್ಕಬಾರದು.

## ಸದ್ಯಕ್ಕೆ ಇರುವ ಮನಿಆರ್ಡರ ಕಮಿಶನ್ ದರಗಳು

(i) ಮೊದಲಿನ ೫ ರೂ. ಗಳಿಗೆ ೨ ಆಣೆ. (ii) ೫ ರೂ. ಗಳಿಗಿಂತ ಹೆಚ್ಚು ೧೦ರ ವರೆಗೆ ೩ ಆಣೆ. (iii) ೧೦ ರೂ. ಗಳಿಗಿಂತ ಹೆಚ್ಚು ೧೫ ರೂ. ಗಳ ವರೆಗೆ ೪ ಆಣೆ. (iv) ೧೫ ರೂ. ಗಳಿಂದ ಹೆಚ್ಚು ೨೫ ರೂ. ಗಳ ವರೆಗೆ

೬ ಆಣೆ. (v) ೨೫ ರೂ. ಗಳಿಗಿಂತ ಹೆಚ್ಚಾದ ಹಣಕ್ಕೆ ಮೇಲ್ಕಂಡ ಭಾಗ ಗಳಂತೆ ಕಮಿಶನ್ ಹೆಚ್ಚಾಗುತ್ತ ಹೋಗುವದು.

ಈ ದರಗಳು ಆಗಾಗ ಹೆಚ್ಚು ಕಡಿಮೆಯಾಗುತ್ತಿರುತ್ತವೆ. ಅದನ್ನು ಪೋಸ್ಟಿನವರಿಂದಲೇ ತಿಳಿದುಕೊಳ್ಳತಕ್ಕದ್ದು.

**ತಾರ ಮನಿಯಾರ್ಡರ:**— ಹಣವು ತೀವ್ರ ಮುಟ್ಟಬೇಕೆಂಬ ಇಚ್ಛೆ ಯಿದ್ದರೆ ಅದನ್ನು ತಾರ ಮನಿಯಾರ್ಡರದಿಂದ ಕಳಿಸುವರು. ಇದಕ್ಕೂ ಸಾದಾ ಮನಿ ಆರ್ಡರದಂತೆಯೇ ಫಾರ್ಮನ್ನು ತುಂಬಿ, ಕಮಿಶನ್ ಸಹ ಹಣವನ್ನು ಕೊಡಬೇಕು ಅಲ್ಲದೆ ತಂತೀ ಟಪಾಲಿನ ಖರ್ಚು ಕೊಟ್ಟು ೨ ಆಣೆ ಹೆಚ್ಚಿನಕರ (ಸರಚಾರ್ಜ)ವನ್ನು ಕೊಡಬೇಕಾಗುವದು. ಇಂಥ ಮನಿಯಾರ್ಡರದಲ್ಲಿ ಪೂರ್ಣ ರೂಪಾಯಿಗಳನ್ನು ಮಾತ್ರ ಸ್ವೀಕರಿಸುವರು. ಮುಂದೆ ಹಣಮುಟ್ಟಿಸುವ ವ್ಯವಸ್ಥೆಯು ಸಾದಾ ಮನಿಯಾರ್ಡರದಂತೆ; ಆದು ತಂತಿಟಪಾಲಿನಂತೆ ತೀವ್ರ ಮುಟ್ಟುವದು.

**ಪೋಸ್ಟಲ್ ಸೇವ್ಹಿಂಗ್ಸ ಬ್ಯಾಂಕ:**—ಪ್ರತಿಯೊಬ್ಬನು ತನ್ನ ಮುಂದಿನ ಆಗು ಹೋಗುಗಳ ಸಲುವಾಗಿ ಕೆಲವೊಂದು ಹಣವನ್ನು ಸಂಗ್ರಹಿಸುವದು ಸ್ವಾಭಾವಿಕವು. ಅಂಥ ಹಣವನ್ನು ಇಡಲಿಕ್ಕೂ, ತಕ್ಕೊಳ್ಳಲಿಕ್ಕೂ ಅನುಕೂಲ ವಾಗಬೇಕೆಂದು ಸರಕಾರದವರು ಒಂದು ಬ್ಯಾಂಕನ್ನು ತೆರೆದಿರುವರು. ಅದಕ್ಕೆ ಸೇವ್ಹಿಂಗ್ಸ ಬ್ಯಾಂಕ ಅನ್ನುವರು. ಇದಕ್ಕೆ "ಪೋಸ್ಟಲ್ ಸೇವಿಂಗ್ಸ ಬ್ಯಾಂಕ" ಎಂದೂ ಹೆಸರು.

ಇದರಲ್ಲಿ ಹಣವನ್ನು ಇಡುವವನು ಪೋಸ್ಟಿನಲ್ಲಿ ಒಂದು ಅರ್ಜಿಯನ್ನು ಕೊಡಬೇಕು. ಅವರು ಒಂದು ಪಾಸ ಬುಕ್ಕನ್ನು ಕೊಡುವರು. ಅದರಲ್ಲಿ ಇಟ್ಟ ಹಾಗು ತಕ್ಕೊಂಡ ಹಣವನ್ನು ತಾರೀಖವಾರ ಬರೆಯುವ ವ್ಯವಸ್ಥೆ ಇರುತ್ತದೆ.

**ಸೇವ್ಹಿಂಗ್ಸ ಬ್ಯಾಂಕಿನ ವ್ಯವಹಾರದ ನಿಯಮಗಳು:**— (೧) ಒಬ್ಬನು ತನ್ನ ಹೆಸರಿನಿಂದ ಒಂದೇ ಖಾತೆಯನ್ನು ಆರಂಭಿಸಲು ಬರುತ್ತದೆ. (೨) ಹಣ ವನ್ನು ಒಂದು ವಾರದಲ್ಲಿ ಬೇಕಾದಷ್ಟು ಸಾರೆ ಇಡಬಹುದು. ಆದರೆ ಸೋಮ ವಾರದಿಂದ ಶನಿವಾರದ ವರೆಗಿನ ಅವಧಿಯಲ್ಲಿ ಒಂದೇ ಸಾರೆ ಮಾತ್ರ ಹಣವನ್ನು ತಕ್ಕೊಳ್ಳಲಿಕ್ಕೆ ಬರುತ್ತದೆ. (೩) ಒಬ್ಬನ ಹೆಸರಿನಿಂದ ೨ ರೂ. ಗಳಿಂದ ೧೦ ಸಾವಿರ ರೂ.ಗಳ ವರೆಗೆ ಮಾತ್ರ ಹಣ ಇಡಬಹುದು. ಪಾಸ ಬುಕ್ಕಿನಲ್ಲಿ ಕನಿಷ್ಟ

೨ ರೂ. ಗಳಾದರೂ ಶಿಲಕು ಇರಲೇಬೇಕು. (೪) ತಿಂಗಳ ೪ನೇ ತಾರೀಖಿನ ನಂತರ ಇಟ್ಟ ಹಣಕ್ಕೆ ಆ ತಿಂಗಳ ಬಡ್ಡಿ ದೊರೆಯುವದಿಲ್ಲ. ಅಂದರೆ ೪ನೇ ತಾರೀಖಿನಿಂದ ಆ ತಿಂಗಳ ಕೊನೆಯವರೆಗೆ ತೀರ ಕಡಿಮೆ ಶಿಲಕು ಇರುವ ಹಣಕ್ಕೆ ಮಾತ್ರ ಬಡ್ಡಿ ದೊರೆಯುತ್ತದೆ.

(೫) ಇಡೀ ವರ್ಷ ೨೦೦ ರೂ. ಅಥವಾ ಅದಕ್ಕಿಂತಲೂ ಹೆಚ್ಚು ಹಣ ಶಿಲಕು ಇದ್ದರೆ, ೧೦೦ಕ್ಕೆ ೧ವರ್ಷಕ್ಕೆ ೨ರಂತೆ, ಬಡ್ಡಿ ದೊರೆಯುತ್ತದೆ. ಆದರೆ ೨೦೦ ರೂ. ಕ್ಕಿಂತ ಒಂದೇ ರೂಪಾಯಿ ಕಡಿಮೆಯಿರಲಿ (ಅದು ಒಂದೇ ದಿವಸ ಕಡಿಮೆಯಿದ್ದರೂ ಸಹ) ೧೦೦ಕ್ಕೆ ೧ವರ್ಷಕ್ಕೆ ೧½ರಂತೆ ಬಡ್ಡಿ ದೊರೆಯುವದು. (೬) ಪೂರ್ಣ ರೂಪಾಯಿಗಳಿಗೆ ಮಾತ್ರ ಬಡ್ಡಿ ಆಕರಿಸುವರು; ಅದರಂತೆ ಬಡ್ಡಿಯಲ್ಲಿ ಅಪೂರ್ಣ (ಪೈ) ಬಂದರೆ ಹಿಡಿಯುವದಿಲ್ಲ. (೭) ಎಲ್ಲ ಬ್ಯಾಂಕುಗಳಂತೆಯೇ ವರ್ಷವು ಎಪ್ರಿಲ ೧ನೇ ತಾರೀಖಿನಿಂದ ಆರಂಭವಾಗಿ ಮಾರ್ಚ ೩೧ನೇ ತಾರೀಖಿಗೆ ಮುಗಿಯುವದು. (೮) ಕಳೆದ ವರ್ಷದಲ್ಲಿ ಶಿಲ್ಕು ಉಳಿದ ಹಣವನ್ನು ಮುಂದಿನ ವರುಷದ ಠೇವಿನಲ್ಲಿ ಕೂಡಿಸಿ, ಇಡೀ ಹಣಕ್ಕೆ ಬಡ್ಡಿಯನ್ನು ಆಕರಿಸುವರು.

**ಅಂಚೆಯಿಂದ ವಸ್ತುಗಳನ್ನು ಕಳಿಸುವದು:—** ಪೋಸ್ಟಿನಿಂದ ಕಾರ್ಡು, ಪಾಕೀಟು, ಹಣವನ್ನು ಕಳಿಸಿದಂತೆ ವಸ್ತುಗಳನ್ನೂ ಕಳಿಸಲಿಕ್ಕೆ ಬರುವದು. ಆದರೆ ಅದು ೧೨೦೦ ತೊಲೆಗಳಿಗಿಂತ ಹೆಚ್ಚು ಭಾರ ಇರಬಾರದು. ಹೀಗೆ ಅಂಚೆಯಿಂದ ವಸ್ತುಗಳನ್ನು ಕಳಿಸುವದರಲ್ಲಿ ಬೇರೆಬೇರೆ ರೀತಿಗಳಿವೆ. ಅವುಗಳನ್ನು ಒಂದೊಂದಾಗಿ ಕಲಿಯೋಣ.

**(ಅ) ಬುಕ್-ಪೋಸ್ಟ:—** ಮುದ್ರಿಸಿದ ಪುಸ್ತಕ, ಆಮಂತ್ರಣ ಪತ್ರಿಕೆ ಮೊದಲಾದವುಗಳನ್ನು ಮಾತ್ರ ಕಳಿಸಲಿಕ್ಕೆ ಬರುತ್ತದೆ. ಆದರೆ ಇವುಗಳಲ್ಲಿ ಹಸ್ತಾಕ್ಷರಗಳಿರಕೂಡದು. ಮುದ್ರಣಕ್ಕೆ ಸಂಬಂಧಿಸಿದ ವಿಷಯದ ಹಸ್ತಾಕ್ಷರಗಳಿದ್ದರೆ ಮಾತ್ರ ಕಳಿಸಲಡ್ಡಿಯಿಲ್ಲ. ಬುಕ್-ಪೋಸ್ಟಿನ ಕಟ್ಟುಬಿಚ್ಚಿ ನೋಡಲು ಬರುವಂತಿರಬೇಕು. ಹೀಗೆ ಕಳಿಸುವದಕ್ಕೆ ಮೊದಲಿನ ೫ ತೊಲೆ ಇಲ್ಲವೆ ಅದಕ್ಕಿಂತ ಕಡಿಮೆ ತೂಕಕ್ಕೆ ೩ ದುಡ್ಡು ಹಾಗೂ ಮುಂದಿನ ಪ್ರತಿ ೨½ ತೊಲೆ ಅಥವಾ ಅದರ ಭಾಗಕ್ಕೆ ೧ ದುಡ್ಡಿನಂತೆ ತಿಕೀಟು ಹಚ್ಚಬೇಕು. ಕಟ್ಟಿನ ಮೇಲೆ **ಬುಕ್-ಪೋಸ್ಟ** ಎಂದು ಬರೆದು ವಿಳಾಸ ಮುಂತಾದ್ದನ್ನು ಬರೆಯಬೇಕು. ವಸ್ತುಗಳ ತೂಕವು ೨೦೦ ತೊಲೆಗೆ ಮಿಕ್ಕಕೂಡದು.

**(ಆ) ಪಾರ್ಸಲ್:—** ಪಾರ್ಸಲ್‌ದಿಂದ ವಸ್ತುಗಳನ್ನು ಕಳಿಸುವಾಗ ಅವುಗಳನ್ನು ರಟ್ಟಿನ ಇಲ್ಲವೆ ತಿಳುವಾದ ತಗಡಿನ ಸಣ್ಣ ಡಬ್ಬಿಗಳಲ್ಲಿಟ್ಟು ಮೇಲೆ ಅರಗೆಯನ್ನು ಹಾಕಿ ಹೊಲಿಯಬೇಕು. ಅದರ ಮೇಲೆ ಪಾರ್ಸಲ್ ಎಂದು ಬರೆದು, ಮುಟ್ಟತಕ್ಕ ವಿಳಾಸ ಮುಂತಾದ್ದನ್ನು ಬರೆಯಬೇಕು. ಹೀಗೆ ಕಳಿಸುವದಕ್ಕೆ ಮೊದಲಿನ ೪೦ ತೊಲೆ ಅಥವಾ ಅದಕ್ಕೂ ಕಡಿಮೆ ತೂಕವುಳ್ಳ ಪಾರ್ಸಲ್ಲುಗಳಿಗೆ ೬ ಆಣೆಗಳ ತಿಕೀಟು ಹಚ್ಚಬೇಕು. ಮುಂದೆ ಹೆಚ್ಚಿನ ತೂಕದ ಪ್ರತಿ ೪೦ ತೊಲೆಗೆ ಅಥವಾ ಅದರ ಭಾಗಕ್ಕೆ ೬ ಆಣೆಗಳ ತಿಕೀಟು ಹಚ್ಚಬೇಕು. ೪೨೦ ತೊಲೆಗಳಿಗಿಂತ ಹೆಚ್ಚು ಭಾರವುಳ್ಳ ಪಾರ್ಸಲ್ಲುಗಳನ್ನು ರಜಿಸ್ಟರ ಮಾಡಲೇಬೇಕು. ೧೦೦೦ ತೊಲೆಗಳಿಗಿಂತ ಹೆಚ್ಚು ಭಾರವುಳ್ಳ ವಸ್ತುಗಳನ್ನು ಪೋಸ್ಟಿನಿಂದ ಕಳಿಸಲಿಕ್ಕೆ ಬರುವದಿಲ್ಲ.

**(ಇ) ರಜಿಸ್ಟರ:—** ವಸ್ತುಗಳನ್ನು ರಜಿಸ್ಟರ ಮಾಡಿ ಕಳಿಸಬೇಕಾದರೆ ಪಾರ್ಸಲ್ಲಿನ ನಿಯಮದಂತೆ ಅದರ ತೂಕಕ್ಕನುಸರಿಸಿ ತಿಕೀಟುಗಳನ್ನು ಹಚ್ಚಬೇಕು. ಅಲ್ಲದೆ ರಜಿಸ್ಟರ ವೆಚ್ಚವೆಂದು ೬ ಆಣೆಗಳ ಹೆಚ್ಚಿನ ತಿಕೀಟುಗಳನ್ನು ಹಚ್ಚಬೇಕು. ಹಾಗೂ ಕಟ್ಟಿನ ಮೇಲೆ “ರಜಿಸ್ಟರ್ಡ್ ಪೋಸ್ಟ ಪಾರ್ಸಲ್” ಎಂದು ಬರೆಯಬೇಕು. ನೀವು ಕಳಿಸಿದ ವಸ್ತುವು ವಿಳಾಸದಾರನಿಗೆ ಮುಟ್ಟಿದ ಬಗ್ಗೆ ನಿಮಗೆ ಪಾವತಿ ಬೇಕಾದರೆ ಅದಕ್ಕಾಗಿ ಮತ್ತೆ ೧ ಆಣೆಯ ತಿಕೀಟನ್ನು ಹಚ್ಚಿ ಪರತ ಪಾವತಿಯನ್ನು ತುಂಬಿಕೊಡಬೇಕು.

**(ಈ) ವ್ಹಿ. ಪಿ. ಮಾಡುವದು:—** ನೀವು ಕಳಿಸುವ ವಸ್ತುಗಳ ಬೆಲೆ ಹಾಗೂ ಕಳಿಸುವ ಖರ್ಚು ಇವೆರಡೂ ಹಣವು ನಿಮಗೆ ವಿಳಾಸದಾರನಿಂದ ಬರಬೇಕಾಗಿದ್ದರೆ ಆಗ ವಸ್ತುಗಳನ್ನು ವ್ಹಿ. ಪಿ. ಯಿಂದ ಕಳಿಸಬೇಕು. ಸಾದಾ ಪಾರ್ಸಲ್ಲಿನ ನಿಯಮದಂತೆ ಅದಕ್ಕೆ ತಗಲುವಷ್ಟು ಅಂಚೆಯ ತಿಕೀಟುಗಳನ್ನು ಹಚ್ಚಿ ಅದನ್ನು ರಜಿಸ್ಟರ ಮಾಡಲೇಬೇಕು. ಆದ್ದರಿಂದ ಮೇಲೆ ಹೇಳಿದ ತಿಕೀಟುಗಳಲ್ಲದೆ ರಜಿಸ್ಟರಕ್ಕೆ ಬೇಕಾದ ತಿಕೀಟುಗಳನ್ನೂ ಹಚ್ಚಬೇಕು. ಇದಲ್ಲದೆ ವ್ಹಿ. ಪಿ. ಯಿಂದ ನಿಮಗೆ ದೊರೆಯಬೇಕಾದ ಹಣವು ೨೫ ರೂಪಾಯಿಗಳಿಗಿಂತ ಕಡಿಮೆಯಿದ್ದರೆ ೧ ಆಣೆ; ೨೫ ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ ೨ ಆಣೆಗಳ ಹೆಚ್ಚಿನ ತಿಕೀಟುಗಳನ್ನು ಹಚ್ಚಬೇಕು. ಮತ್ತು ಕಟ್ಟಿನ ಮೇಲೆ ನಿಮಗೆ ಬರತಕ್ಕ ಹಣವನ್ನು ಕಾಣಿಸಿ ವ್ಹಿ. ಪಿ. ಪಿ. ಎಂದು ಬರೆಯಬೇಕು. ವಿಳಾಸದಾರನು

ಸ್ವೀಕರಿಸದಿದ್ದರೆ ಅವನ್ನು ನಿಮಗೆ ಮರಳಿ ಕಳಿಸುವರು. ೫೦ ರೂಪಾಯಿಗಿಂತ ಹೆಚ್ಚಿನ ಹಣಕ್ಕೆ ವ್ಹಿ. ಪಿ. ಮಾಡುವದಿದ್ದರೆ ಅದಕ್ಕೆ ವಿಮೆ (ಇನ್ಶೂರ) ಇಳಿಸಬೇಕು. ೫೦೦೦ ರೂಪಾಯಿಗಳಿಗೆ ಮಿಕ್ಕಿದ ವ್ಹಿ. ಪಿ. ಯನ್ನು ಅಂಚೆಯವರು ಸ್ವೀಕರಿಸುವದಿಲ್ಲ.

# ಉಗಿಬಂಡಿಯಿಂದ ವಸ್ತುಗಳನ್ನು ಕಳಿಸುವದು

೧೦೦೦ ತೊಲೆಗಳಿಗಿಂತ ಹೆಚ್ಚು ಭಾರವಾದ ವಸ್ತುಗಳನ್ನು ಉಗಿಬಂಡಿಯಿಂದ ಕಳಿಸಬೇಕಾಗುವದು. ಅವುಗಳಿಗೆ ತಗಲುವ ವೆಚ್ಚವು ವಸ್ತುಗಳ ತೂಕ, ಕಳಿಸಬೇಕಾದ ಊರ ಅಂತರ ಹಾಗೂ ಕಳಿಸಬೇಕಾದ ಗಾಡಿ (ಪ್ಯಾಸೆಂಜರ ಅಥವಾ ಗೂಡ್ಸ) ಇವುಗಳ ಮೇಲೆ ಅವಲಂಬಿಸಿರುವದು. ಇದರಲ್ಲಿ ಎರಡು ಪ್ರಕಾರಗಳುಂಟು.

(ಅ) **ಗೂಡ್ಸ ಗಾಡಿಯಿಂದ:—** ವಸ್ತುವನ್ನು ಗೂಡ್ಸಗಾಡಿಯಿಂದ ಕಳಿಸಿದರೆ ವೆಚ್ಚವು ಕಡಿಮೆ ಬರುವದು. ಆದರೆ ಮುಟ್ಟಲು ತಡವಾಗುವದು.

(ಆ) **ಪ್ಯಾಸೆಂಜರ ಗಾಡಿಯಿಂದ:—** ವಸ್ತುಗಳನ್ನು ಪ್ಯಾಸೆಂಜರ ಗಾಡಿಗಳಿಂದ ಕಳಿಸಿದರೆ ಹೆಚ್ಚು ವೆಚ್ಚವು ತಗಲುವದು. ಆದರೆ ವಸ್ತುಗಳು ಬೇಗ ಮುಟ್ಟುವವು. ಮಾಲು ಕಳಿಸಿದ ಕೂಡಲೆ ರೈಲ್ವೆಯವರಿಂದ ಪಡೆದ ಪಾವತಿ (ರಶೀದಿ)ಯನ್ನು ಸ್ವೀಕರಿಸುವವನಿಗೆ ಟಪಾಲುದ್ವಾರಾ ತಪ್ಪದೆ ಕಳಿಸಬೇಕು. ಅಂದರೆ ಅವನ್ನು ತೋರಿಸಿ ಅವರು ಆ ಮಾಲನ್ನು ಪಡೆಯುವರು.

## ಅಭ್ಯಸನಗಳು

೧. ಮನಿಯಾರ್ಡರುಗಳಲ್ಲಿ ಪ್ರಕಾರಗಳೆಷ್ಟು? ಅವುಗಳಲ್ಲಿ ಸಾದಾ ಮನಿಯಾರ್ಡರ ಮಾಡುವ ಬಗೆಯನ್ನು ಹೇಳಿರಿ?

೨. ಅಂಚೆಗಳಿಂದ ವಸ್ತುಗಳನ್ನು ಕಳುಹಿಸುವ ಬಗೆ ಹೇಗೆ?

೩. ಉಗಿಬಂಡಿಯಿಂದ ವಸ್ತುಗಳನ್ನು ಕಳುಹಿಸುವದು ಹೇಗೆ?

# ಹಳ್ಳಿಯ ಆಡಳಿತ—ಗ್ರಾಮ ಪಂಚಾಯತಿ

ಹಳ್ಳಿಯ ಶಾಂತತೆ, ತೆರಿಗೆಯ ವಸೂಲಿ ಮುಂತಾದ ಕೆಲಸಗಳನ್ನು ಗ್ರಾಮಸ್ಥರು ನೋಡಿಕೊಳ್ಳುವರಷ್ಟೇ? ಆದರೆ ಇನ್ನುಳಿದ ಕೆಲಸಗಳನ್ನು ಅಂದರೆ ಆರೋಗ್ಯ ರಕ್ಷಣೆ, ರಸ್ತೆಗಳ ಸುಧಾರಣೆ, ಗ್ರಾಮ ಸ್ವಚ್ಛತೆ ಮುಂತಾದವುಗಳನ್ನು ನೋಡಿಕೊಳ್ಳಲು ಹಳ್ಳಿಗಳಲ್ಲಿ ಒಂದು ಸಾರ್ವಜನಿಕ ಸಂಸ್ಥೆಯಿರುವದು. ಅದಕ್ಕೆ **ಗ್ರಾಮ ಪಂಚಾಯತಿ** ಎನ್ನುವರು. ಇದು ೫೦೦ ಅಥವಾ ಅದಕ್ಕೂ ಹೆಚ್ಚಿನ ಜನಸಂಖ್ಯೆಯುಳ್ಳ ಹಳ್ಳಿಗಳಲ್ಲಿ ಮಾತ್ರ ಇರುವದು. ಈ ಸಂಸ್ಥೆಯು ಜಿಲ್ಹಾ ಲೋಕಲ್ ಬೋರ್ಡಿನ ಮೇಲ್ವಿಚಾರಣೆಗೆ ಒಳಪಟ್ಟಿರುವದು.

ಗ್ರಾಮ ಪಂಚಾಯತದಲ್ಲಿರುವ ಸಭಾಸದರಿಗೆ **ಪಂಚ**ರೆನ್ನುವರು. ಊರ ಜನಸಂಖ್ಯೆಯ ಪ್ರಮಾಣಕ್ಕನುಸರಿಸಿ ಪಂಚರ ಸಂಖ್ಯೆಯು ೫ ರಿಂದ ೯ರ ವರೆಗೆ ಇರುವದು. ವಯಸ್ಸಿಗೆ ಬಂದ ಸ್ತ್ರೀ-ಪುರುಷರೆಲ್ಲರೂ ಮತಹಾಕಿ ಇವರನ್ನು ಆರಿಸುವರು. ಹೀಗೆ ಆರಿಸಲ್ಪಟ್ಟ ಪಂಚರು ಒಂದೆಡೆಗೆ ಸೇರಿ ತಮ್ಮಲ್ಲಿಯೇ ಒಬ್ಬ ಮುಖ್ಯಸ್ಥನನ್ನು ಆರಿಸಿಕೊಳ್ಳುವರು. ಅವನಿಗೆ **ಸರಪಂಚ** (ಮುಖ್ಯ ಪಂಚ) ನೆಂಬ ಹೆಸರು. ಪಂಚರು ಬೇರೆ ಬೇರೆ ಕೆಲಸಗಳನ್ನು ಸಾಗಿಸಿಕೊಂಡು ಹೋಗಲು ಬೇರೆ ಬೇರೆ ಕಮೀಟಿಗಳನ್ನು ಮಾಡಿಕೊಂಡು ಅವುಗಳ ಮುಖಾಂತರ ಕೆಲಸ ನಡೆಸುವರು. ಉದಾ :— ಶಾಲಾ ಕಮೀಟಿ (ಶಿಕ್ಷಣದ ಬಗ್ಗೆ); ಬೆಂಚ ಕಮೀಟಿ (ನ್ಯಾಯ ವಿಚಾರಣೆಯ ಬಗ್ಗೆ) ಗ್ರಾಮ ಪಂಚಾಯತಿಗೆ ಸಂಬಂಧಪಟ್ಟ ಲೆಕ್ಕ ಪತ್ರಗಳನ್ನಿಡುವದಕ್ಕೂ ಜಿಲ್ಹಾ ಲೋಕಲ್ ಬೋರ್ಡು ಹಾಗೂ ಇನ್ನುಳಿದ ಮೇಲಧಿಕಾರಿಗಳೊಡನೆ ಪತ್ರವ್ಯವಹಾರ ಮಾಡಲಿಕ್ಕೂ ಒಬ್ಬ ಕಾರ್ಯದರ್ಶಿಯಿರುವನು. ಅವನಿಗೆ **ಸೆಕ್ರೆಟರಿ** ಎನ್ನುವರು. ಅವನನ್ನು ಜಿಲ್ಹಾಧಿಕಾರಿಗಳು ನಿಯಮಿಸುವರು. ಅವನಿಗೆ ಪಗಾರವು ಗ್ರಾಮಪಂಚಾಯತದಿಂದ ದೊರೆಯುವದು. ಪಂಚರಿಗೆ ಮಾತ್ರ ಪಗಾರವಿರುವದಿಲ್ಲ. ಅವರು ಗೌರವ ಸಭಾಸದರು.

**ಗ್ರಾಮಪಂಚಾಯತದ ಕೆಲಸಗಳು :—**

**೧) ನ್ಯಾಯವಿಚಾರಣೆ :—** ಒಂದು ನೂರು ರೂಪಾಯಿಗಳ ಒಳಗಿನ ಯಾವುದೇ ಕೊಡುಕೊಳ್ಳಿ (ದಾವೆ) ಯನ್ನು ವಿಚಾರಿಸುವದು. ಸಣ್ಣ ಪುಟ್ಟ ಅಪರಾಧಿಗಳಿಗೆ ೧೦ ರೂಪಾಯಿಗಳಿಗೆ ಮಿಕ್ಕದಷ್ಟು ದಂಡಕಟ್ಟುವದು.

೨) **ನೀರಿನ ಸೌಕರ್ಯ:**— ಕೆರೆಬಾವಿಗಳನ್ನು ತೋಡಿಸಿ ಇಲ್ಲವೆ ಇದ್ದವುಗಳನ್ನು ಸರಿಪಡಿಸಿ ಊರ ಜನರಿಗೆ ನೀರಿನ ಅನುಕೂಲತೆಗಳನ್ನು ಒದಗಿಸಿ ಕೊಡುವದು.

೩) **ಮಾರ್ಗ ಸೌಕರ್ಯ:**— ಹಳ್ಳಿಯೊಳಗಿನ ಮಾರ್ಗವನ್ನು ಸರಿ ಪಡಿಸುವದು.

೪) **ಗ್ರಾಮ ಸ್ವಚ್ಛತೆ:**— ಊರೊಳಗಿನ ಮಾರ್ಗಗಳನ್ನು ಗುಡಿಸಿ ಸ್ವಚ್ಛ ಇಡಿಸುವದು.

೫) **ಆರೋಗ್ಯ ರಕ್ಷಣೆ:**— ಊರಲ್ಲಿ ಮಾರಿಕಾ, ಪ್ಲೇಗು ಮುಂತಾದ ಸಿಡುಗಿನ ಜೇನೆಗಳು ಹಬ್ಬಿದರೆ ಅವುಗಳ ಪ್ರತಿಬಂಧಕ ಉಪಾಯಗಳನ್ನು ಕೈಕೊಳ್ಳುವದು.

೬) **ಶಿಕ್ಷಣ:**— ಮಕ್ಕಳ ಶಿಕ್ಷಣ ಹಾಗು ಶಾಲೆಗಳ ಪ್ರೋತ್ಸಾಹನೆ ಮಾಡುವದು.

೭) **ಇತರ:**— ಕೊಂಡವಾಡೆ ಪ್ರೋತ್ಸಾಹನೆ ಮಾಡುವದು.

ಮೇಲೆ ಹೇಳಿದ ಎಲ್ಲ ಕರ್ತವ್ಯಗಳನ್ನು ನಿರ್ವಹಿಸಲಿಕ್ಕೂ, ಸೆಕ್ರೆಟರಿಯ ಪಗಾರ ಕೊಡಲಿಕ್ಕೂ ಪಂಚಾಯತಕ್ಕೆ ಹಣ ಬೇಕಲ್ಲವೇ ? ಈ ಹಣವನ್ನು ದೊರಕಿಸಲಿಕ್ಕೆ ಪಂಚಾಯತಕ್ಕೆ ಕೆಲವು ಮಾರ್ಗಗಳಿವೆ. ಅವು ಯಾವು ವೆಂದರೆ:—

ಅ) ಮನೆಪಟ್ಟಿ, ಕೊಂಡವಾಡೆಯಿಂದ ವಸೂಲಾದ ಹಣ, ಜಾತ್ರೆಯಲ್ಲಿ ಅಂಗಡಿಗಳಿಗೆ ಹಾಕುವ ಪಟ್ಟಿ, ಮುಂತಾದವು.

ಬ) ನ್ಯಾಯ ವಿಚಾರಣೆಯಲ್ಲಿ ವಿಧಿಸಿದ ದಂಡದ ಹಣದ ವಸೂಲಿ.

ಕ) ಜಿಲ್ಲಾ ಲೋಕಲ್ ಬೋರ್ಡ ಮುಂತಾದವುಗಳಿಂದ ಬಂದ ಸಹಾಯ ಧನ.

ಮೇಲೆ ವಿವರಿಸಿದಂತೆ ಗ್ರಾಮಪಂಚಾಯತಗಳು ಹಳ್ಳಿಗೆ ಸಂಬಂಧಿಸಿದ ಬಹುತರ ಎಲ್ಲ ಮುಖ್ಯ ಕೆಲಸಗಳನ್ನು ಸಾಗಿಸಿಕೊಂಡು ಹೋಗುವವು. ಅವುಗಳ ಸದಸ್ಯರು ಜನರಿಂದ ಆರಿಸಲ್ಪಟ್ಟಿರುವರು. ಹೀಗಾಗಿ ಅವು ನಿಜವಾಗಿಯೂ ಸಣ್ಣ **ಪ್ರಜಾ ಸರಕಾರಗಳೆಂದೇ** ಹೇಳಬಹುದು.

# ಪಟ್ಟಣಗಳ ಆಡಳಿತ—ಮ್ಯುನಸಿಪಾಲಿಟಿ

ಹಳ್ಳಿಯ ಆಡಳಿತ ಸಾಗಿಸಲು ಗ್ರಾಮಪಂಚಾಯತಿ ಇರುವಂತೆ ಪಟ್ಟಣದ ಆಡಳಿತವನ್ನು ನೋಡಿಕೊಳ್ಳಲು ಮುನಸೀಪಾಲ್ಟಿ ಅಥವಾ ನಗರಸಭೆ ಇರುವದು. ಮೂರು ವರುಷಗಳಿಗೊಮ್ಮೆ ಜರುಗುವ ಚುನಾವಣೆಗಳಲ್ಲಿ ಇದರ ಪ್ರತಿನಿಧಿಗಳೂ ಪಟ್ಟಣಿಗರಿಂದಲೇ ಆರಿಸಿ ಬರುವರು. ಇವರಿಗೆ ಮೆಂಬರರು ಅಥವಾ ಸಭಾಸದರೆನ್ನುವರು. ಇವರಾದರೂ ಗೌರವ ಸಭಾಸದರು.

ಆರಿಸಿ ಬಂದ ಸಭಾಸದರೆಲ್ಲ ಒಂದೆಡೆಗೆ ಸೇರಿ ತಮ್ಮ ಅಧ್ಯಕ್ಷ ಹಾಗೂ ಉಪಾಧ್ಯಕ್ಷರನ್ನು ಆರಿಸಿಕೊಳ್ಳುವರು. ಶಿಕ್ಷಣ ವ್ಯವಸ್ಥೆಗಾಗಿ ಒಂದು ಶಾಲಾ ಕಮೀಟಿ ಹಾಗೂ ಇನ್ನುಳಿದ ಕಾರ್ಯನಿರ್ವಹಣೆಗಾಗಿ ಒಂದು ಸ್ಟ್ಯಾಂಡಿಂಗ ಕಮೀಟಿ ಹೀಗೆ ಎರಡು ಮುಖ್ಯ ಕಮೀಟಿ (ಸಮಿತಿ) ಗಳನ್ನು ರಚಿಸಿಕೊಳ್ಳುವರು. ಇವಲ್ಲದೆ ಸ್ಟ್ಯಾಂಡಿಂಗ ಕಮೀಟಿಯ ಕೈಕೆಳಗೆ ಇನ್ನೂ ಅನೇಕ ಉಪ ಸಮಿತಿಗಳಿರುವವು. ಆಯಾ ಸಮಿತಿಗಳಿಗಾಗಿ ಒಬ್ಬೊಬ್ಬ ಚೇರಮನ್ ಇರುವನು. ನಗರ ಸಭೆಯವರು ಯೋಜಿಸಿದ ಎಲ್ಲ ಕಾರ್ಯಗಳನ್ನು ಮಾಡಿಸಲಿಕ್ಕೂ, ಕಚೇರಿಯ ಎಲ್ಲ ಕೆಲಸಗಳ ಮೇಲ್ವಿಚಾರಣೆಗೂ ಚೀಫ ಆಫೀಸರ ಎಂಬ ಒಬ್ಬ ಅಧಿಕಾರಿಯಿರುವನು.

## ನಗರ ಸಭೆಯ ಕರ್ತವ್ಯಗಳು

೧) **ಶಿಕ್ಷಣ ಸೌಕರ್ಯ :—** ನಗರದಲ್ಲಿರುವ ೭ ರಿಂದ ೧೧ ವಯಸ್ಸಿನೊಳಗಿನ ಎಲ್ಲ ಬಾಲಕರಿಗೆ ಒತ್ತಾಯದ ಪುಕ್ಕಟೆ ಪ್ರಾಥಮಿಕ ಶಿಕ್ಷಣದ ಏರ್ಪಾಡು ಮಾಡುವದು. ಇದರ ಮೇಲ್ವಿಚಾರಣಕ್ಕಾಗಿ **ಅಡ್ಮಿನಿಸ್ಟ್ರೇಟಿವ್ಹ** ಆಫೀಸರ ಎಂಬ ಸರಕಾರೀ ಅಧಿಕಾರಿಯಿರುವನು.

೨) **ಮಾರ್ಗ ಸೌಕರ್ಯ:—** ನಗರದಲ್ಲಿರುವ ಮಾರ್ಗಗಳನ್ನು ಸರಿಪಡಿಸುವದು ಹಾಗೂ ಅವಶ್ಯವೆನಿಸಿದಲ್ಲಿ ಹೊಸ ಮಾರ್ಗಗಳನ್ನು ರಚಿಸುವದು. ಇದರ ಮೇಲ್ವಿಚಾರಣೆಗೆ ಒಬ್ಬ ಎಂಜಿನಿಯರನಿರುವನು. ಇವನು ನೀರಿನ ಸೌಕರ್ಯವನ್ನೂ ನೋಡಿಕೊಳ್ಳುವನು.

೩) **ನೀರಿನ ಸೌಕರ್ಯ:—**ನಳ, ಭಾವಿ, ಕೆರೆ ಮುಂತಾದವುಗಳಿಂದ ಜನರಿಗೆ ಕುಡಿಯುವ ನೀರಿನ ಅನುಕೂಲತೆಗಳನ್ನು ಒದಗಿಸುವದು.

೪) **ನಗರ ನೈರ್ಮಲ್ಯ:—** ಊರಲ್ಲಿರುವ ಗಟಾರ, ಪಾಯಖಾನೆ, ರಸ್ತೆ ಮುಂತಾದವುಗಳನ್ನು ಸ್ವಚ್ಛವಾಗಿರಿಸಿ ನಗರ ನೈರ್ಮಲ್ಯವನ್ನು ಕಾಪಾಡಿ ಕೊಳ್ಳುವದು. ಇದರ ಮೇಲ್ವಿಚಾರಣೆಗೆ ಸ್ಯಾನಿಟರಿ ಇನ್ಸ್‌ಪೆಕ್ಟರ ಎಂಬ ಅಧಿಕಾರಿಯಿರುವನು.

೫) **ಆರೋಗ್ಯ ರಕ್ಷಣೆ:—** ಊರಲ್ಲಿ ಒಂದು ದವಾಖಾನೆಯನ್ನಿಟ್ಟು ಜನರಿಗೆ ಪುಕ್ಕಟೆ ಔಷಧೋಪಚಾರದ ವ್ಯವಸ್ಥೆ ಮಾಡುವದು ಹಾಗೂ ಹಿಡುಗಿನ ಬೇನೆಗಳಲ್ಲಿ ಪ್ರತಿಬಂಧಕ ಉಪಾಯಗಳನ್ನು ಕೈಕೊಳ್ಳುವದು. ಇದಕ್ಕಾಗಿ ಹೆಲ್ತ ಆಫೀಸರ ಎಂಬ ಅಧಿಕಾರಿಯಿರುವನು.

೬) **ದೀಪದ ವ್ಯವಸ್ಥೆ:—** ನಗರದಲ್ಲಿ ರಾತ್ರಿಯ ವೇಳೆಯಲ್ಲಿ ವಿದ್ಯುದ್ದೀಪ ಇಲ್ಲವೆ ಬೆಳಕು ಕೊಡುವ ಬೇರೆಸಾಧನಗಳಿಂದ ದೀಪ ಹಚ್ಚಿಸುವದು.

೭) **ಮನೋರಂಜನೆಯ ವ್ಯವಸ್ಥೆ:—**ಪಟ್ಟಣಿಗರಿಗೆ ಸಾಯಂಕಾಲ ವಿಶ್ರಾಂತಿಗಾಗಿ ಒಂದು ನಗರೋದ್ಯಾನ ಹಾಗೂ ಚಿಕ್ಕ ಮಕ್ಕಳಿಗಾಗಿ ಒಂದು ಆಟದ ಬಯಲು ಇವುಗಳನ್ನು ರಚಿಸುವದು.

೮) **ಧರ್ಮಶಾಲೆ:—** ಪ್ರವಾಸಿಕರಿಗೆ ಇಳಿದುಕೊಳ್ಳಲು ಧರ್ಮಶಾಲೆಗಳನ್ನು ನಿರ್ಮಿಸುವದು.

೯) ನೌಕರರ ಪಗಾರಕೊಡುವದು. ಇವೆಲ್ಲವೂ ಖರ್ಚಿನ ಬಾಬುಗಳು.

## ನಗರ ಸಭೆಗೆ ಹಣದೊರಕುವ ಬಾಬುಗಳು

೧) ಮನೆ ಪಟ್ಟಿ, ನೀರಿನ ಪಟ್ಟಿ, ಭಂಗೀ ಪಟ್ಟಿ, ವಾಹನಗಳ ಮೇಲಿನ ಪಟ್ಟಿ ಮುಂತಾದವುಗಳು.

೨) ನಗರದಲ್ಲಿ ಪ್ರವೇಶಿಸುವ ಸರಕುಗಳ ಮೇಲಿನ ಸುಂಕ (ಜಕಾತಿ)

೩) ಅಂಗಡಿ, ವಖಾರ, ಸಿನೇಮಾ ಗೃಹ, ನಾಟಕ ಮಂದಿರ ಮೊದಲಾದವುಗಳ ಮೇಲೆ ಹಾಕುವ ಲಾಯಸೆನ್ಸ ಕರ.

ನಗರ ಸಭೆಗಳಿಗೆ ಸ್ಥಾನಿಕ ಸ್ವರಾಜ್ಯ ಸಂಸ್ಥೆಯೆನ್ನುವರು.

## ಅಭ್ಯಸನಗಳು

೧. ಗ್ರಾಮ ಪಂಚಾಯತಿಯ ಕರ್ತವ್ಯಗಳು ಯಾವವು ?

೨. ನಗರ ಸಭೆಯ ಕರ್ತವ್ಯಗಳು ಯಾವವು ?

೩. ನಗರ ಸಭೆಗೆ ಹಣದೊರಕುವ ಬಾಬುಗಳು ಯಾವವು ?

# ಪಂಚಾಂಗ, ರೇಲ್ವೆ ಗಾಯಿಡ್ ಹಾಗು ಪೋಸ್ಟಲ್ ಗಾಯಿಡು ಇವುಗಳನ್ನು ಉಪಯೋಗಿಸುವದು.

(ಅ) **ಪಂಚಾಂಗ**:— ನಾವು ಪ್ರತಿದಿನ ಯಾವದೊಂದು ಕೆಲಸಕ್ಕೆ ಹೆಚ್ಚಾಗಿ ತಾರೀಖು ತಿಂಗಳು ಇಸ್ವಿಗಳನ್ನೇ ಉಪಯೋಗಿಸುತ್ತೇವೆ. ಆದರೆ ಮದುವೆ, ಮುಂಜೆ, ಜನನ ಕಾರ್ಯಗಳಲ್ಲಿ ಮುಹೂರ್ತವನ್ನು ಕಂಡು ಹಿಡಿಯ ಬೇಕಾಗುತ್ತದೆ ಆದಕ್ಕಾಗಿ ಪಂಚಾಂಗವನ್ನು ನೋಡಿ ತಿಳಿದುಕೊಳ್ಳುವದು ಅಗತ್ಯವಾಗಿದೆ

**ಪಂಚಾಂಗ**.— ತಿಥಿ, ವಾರ, ನಕ್ಷತ್ರ ಯೋಗ ಮತ್ತು ಕರಣ ಎಂಬ ೫ ವಿಷಯಗಳನ್ನು ತಿಳಿಸುವ ಸಾಧನವೇ ಪಂಚಾಂಗವು. ಇವನ್ನು ಶಾಲಿ ವಾಹನ ಶಕವನ್ನು ಅನುಸರಿಸಿ ಬರೆಯುತ್ತಿರುತ್ತಾರೆ. (ಶಾಲಿವಾಹನ ಶಕದಂತೆ ಕ್ರಿಸ್ತೀ ಶಕ, ಹಿಜರೀಶಕಗಳೆಂದೂ ಇರುತ್ತವೆ.)

ತಾ. ೧೫-೩-೧೯೫೨ ಎಂದರೆ ಕ್ರಿಸ್ತೀಶಕದ ೧೯೫೨ನೆಯ ವರ್ಷದಲ್ಲಿ ೩ನೆಯ ತಿಂಗಳ ೧೫ ನೆಯ ದಿನ ಎಂದು ಅರ್ಥ. ಆದರೆ ಶಾಲಿವಾಹನ ಶಕವನ್ನನುಸರಿಸಿ ಯಾವದೊಂದು ದಿನವನ್ನು ತಿಳಿದುಕೊಳ್ಳಬೇಕಾದರೆ ಪಂಚಾಂಗವನ್ನು ಉಪಯೋಗಿಸಬೇಕು

ಪಂಚಾಂಗದ ಮೇಲ್ಭಾಗದಲ್ಲಿ ಶಾಲಿವಾಹನಶಕೆಯ ಸಂವತ್ಸರವನ್ನು (ವರ್ಷ) ಬರೆದಿರುತ್ತಾರೆ. ಸದ್ಯದ ಸಂವತ್ಸರವು ನಂದನ ಸಂವತ್ಸರವು. ಪ್ರಾರಂಭದ ಕೆಲವು ಪುಟಗಳಲ್ಲಿ ವರ್ಷ ಭವಿಷ್ಯ (ಮಳೆಬೆಳೆಗಳ ಯೋಗ, ಯುದ್ಧದ ವಿಚಾರ ಮುಂತಾದವು) ವನ್ನು ಬರೆದಿರುತ್ತಾರೆ. ವರ್ಷದಲ್ಲಿಯ ಗ್ರಹಣ, ಲಗ್ನ, ಮುಂಜಿವೆಗಳ ಮುಹೂರ್ತಗಳನ್ನು ಮುಂದಿನ ಕೆಲವು ಪುಟ ಗಳಲ್ಲಿ ಕೊಟ್ಟಿರುತ್ತಾರೆ. ಆಮೇಲೆ ಪ್ರತಿಯೊಂದು ಪಕ್ಷದ (೧೫ ದಿನಗಳ) ವಿವರ ವಾದವರ್ಣನೆಯು ಇರುತ್ತದೆ. ಕೊನೆಗೆ ಕನ್ಯಾ, ವರಗಳ ಕುಂಡಲಿ ಗಳನ್ನು ಕೂಡಿಸಿ ನೋಡುವ ಕೋಷ್ಟಕ ಮೊದಲಾದವುಗಳಿರುತ್ತವೆ.

ಈಗ ಪ್ರತಿಪಕ್ಷದ ವಿವರಣೆಯಲ್ಲಿ ಬರುವ ಮುಂದಿನ ವಿಷಯಗಳನ್ನು ಮೊದಲು ತಿಳಿದುಕೊಳ್ಳುವದು ಅವಶ್ಯವಾಗಿದೆ.

**ಮಾಸಗಳು**:— ಪ್ರತಿಯೊಂದು ಸಂವತ್ಸರವು ಚೈತ್ರಶುದ್ಧ ಪ್ರತಿಪದೆ ಯಿಂದ (ಯುಗಾದಿ) ಪ್ರಾರಂಭವಾಗುತ್ತದೆ. ಸಂವತ್ಸರದಲ್ಲಿ ಚೈತ್ರ,

ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಿನ, ಕಾರ್ತಿಕ, ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಎಂಬ ೧೨ ತಿಂಗಳುಗಳು ಇರುತ್ತವೆ. ಇವುಗಳಿಗೆ 'ಮಾಸ'ಗಳೆನ್ನುವರು. ಉದಾ :— ಚೈತ್ರಮಾಸ, ಕಾರ್ತಿಕಮಾಸ.

**ಋತುಗಳು:—** ಚೈತ್ರಮಾಸದಿಂದ ಆರಂಭಿಸಿ ಪ್ರತಿ ೨ ತಿಂಗಳುಗಳ ಅವಧಿಗೆ 'ಋತು'ವೆನ್ನುತ್ತಾರೆ. ವರ್ಷದಲ್ಲಿ ೬ ಋತುಗಳಿರುತ್ತವೆ. ವಸಂತ, ಗ್ರೀಷ್ಮ, ವರ್ಷಾ, ಶರತ್, ಹೇಮಂತ, ಶಿಶಿರ ಇವೇ ಆ ಋತುಗಳು.

**ತಿಥಿಗಳು:—** ಪ್ರತಿಯೊಂದು ಮಾಸದಲ್ಲಿ ೩೦ ದಿನಗಳಿರುತ್ತವೆ. ಇವು ಗಳಿಗೆ ತಿಥಿಗಳೆನ್ನುತ್ತಾರೆ. ಚಂದ್ರನ ಬಿಂಬವು ಸಾವಕಾಶವಾಗಿ ಬೆಳೆಯುತ್ತ ಸಂಪೂರ್ಣ ದುಂಡಗೆ ಆಗಲು ೧೫ ದಿನಗಳು ಬೇಕು. ಈ ಅವಧಿಗೆ ಶುಕ್ಲಪಕ್ಷವೆನ್ನುತ್ತಾರೆ. ಅದು ಸಣ್ಣದಾಗುತ್ತ ಪೂರ್ಣ ಇಲ್ಲದಂತಾಗಲು ಮತ್ತೆ ೧೫ ದಿನಗಳು ಬೇಕು. ಈ ಅವಧಿಗೆ ಕೃಷ್ಣಪಕ್ಷವೆನ್ನುತ್ತಾರೆ. ಶುಕ್ಲ ಪಕ್ಷವೆಂದರೆ ತಿಂಗಳಿನ ಬೆಳಕಿನ ಭಾಗ. ಕೃಷ್ಣಪಕ್ಷವೆಂದರೆ ತಿಂಗಳಿನ ಕತ್ತಲೆಯ ಭಾಗ.

**ಶುಕ್ಲಪಕ್ಷದಲ್ಲಿಯ ತಿಥಿಗಳು:**—ಪ್ರತಿಪದಾ, ದ್ವಿತೀಯಾ, ತೃತೀಯಾ, ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ, ಏಕಾದಶಿ, ದ್ವಾದಶಿ, ತ್ರಯೋದಶಿ, ಚತುರ್ದಶಿ, ಪೂರ್ಣಿಮಾ (ಹುಣ್ಣಿಮೆ) ಈ ತಿಥಿಗಳನ್ನು ೧ ರಿಂದ ೧೫ ರ ವರೆಗಿನ ಸಂಖ್ಯೆಗಳಿಂದ ತೋರಿಸಿರುತ್ತಾರೆ.

**ಕೃಷ್ಣಪಕ್ಷದಲ್ಲಿಯ ತಿಥಿಗಳು:—** ಪ್ರತಿಪದೆಯಿಂದ ಚತುರ್ದಶಿಯ ವರೆಗೆ ಮೇಲಿನಂತೆ ಮತ್ತು ಕೊನೆಗೆ ಅಮಾವಾಸ್ಯೆ ಎಂದು ಇರುತ್ತವೆ. ಚತುರ್ದಶಿಯ ವರೆಗಿನ ತಿಥಿಗಳನ್ನು ೧ ರಿಂದ ೧೪ ರ ವರೆಗಿನ ಸಂಖ್ಯೆಗಳಿಂದ ತೋರಿಸಿ ಅಮಾವಾಸ್ಯೆಗೆ ೩೦ ಈ ಸಂಖ್ಯೆಗಳನ್ನು ಉಪಯೋಗಿಸುತ್ತಾರೆ.

**ವಾರಗಳು:—** ರವಿವಾರ, ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ ಮತ್ತು ಶನಿವಾರ.

**ನಕ್ಷತ್ರಗಳು:—** ಇವು ೨೭. ಕ್ರಮವು ಕೆಳಗಿನಂತಿದೆ. ೧ ಅಶ್ವಿನಿ ೨. ಭರಣಿ ೩ ಕೃತಿಕಾ ೪ ರೋಹಿಣೀ ೫ ಮೃಗಶಿರಾ ೬ ಆರಿದ್ರಾ ೭. ಪುನರ್ವಸು ೮ ಪುಷ್ಯ ೯. ಆಶ್ಲೇಷಾ ೧೦. ಮಘಾ ೧೧ ಪೂರ್ವಾ

೧೨. ಉತ್ತರಾ ೧೩. ಹಸ್ತಾ ೧೪. ಚಿತ್ರಾ ೧೫. ಸ್ವಾತಿ ೧೬. ವಿಶಾಖಾ ೧೭. ಅನುರಾಧಾ ೧೮. ಜ್ಯೇಷ್ಠಾ ೧೯. ಮೂಲಾ ೨೦. ಪೂರ್ವಾಷಾಢಾ ೨೧. ಉತ್ತರಾಷಾಢಾ ೨೨. ಶ್ರವಣಾ ೨೩. ಧನಿಷ್ಠಾ ೨೪. ಶತತಾರಕಾ ೨೫. ಪೂರ್ವಾಭಾದ್ರಪದಾ ೨೬. ಉತ್ತರಾಭಾದ್ರಪದಾ ೨೭. ರೇವತಿ.

**ಯೋಗಗಳು:**— ಇವಾದರೂ ೨೭ ಇರುತ್ತವೆ. ೧. ವಿಷ್ಕಂಭ ೨. ಪ್ರೀತಿ ೩. ಆಯುಷ್ಮಾನ್ ೪ ಸೌಭಾಗ್ಯ ೫. ಶೋಭನ ೬. ಅತಿಗಂಡ ೭. ಸುಕರ್ಮ ೮. ಧೃತಿ ೯. ಶೂಲ ೧೦. ಗಂಡ ೧೧. ವೃದ್ಧಿ ೧೨. ಧ್ರುವ ೧೩. ವ್ಯಾಘಾತ ೧೪. ಹರ್ಷಣ ೧೫. ವಜ್ರ ೧೬. ಸಿದ್ಧಿ ೧೭. ವ್ಯತೀಪಾತ ೧೮. ವರಿಯಾನ ೧೯. ಪರಿಘ ೨೦. ಶಿವ ೨೧. ಸಿದ್ಧ ೨೨. ಸಾಧ್ಯ ೨೩. ಶುಕ್ಲ ೨೪. ಶುಭ ೨೫. ಬ್ರಹ್ಮ ೨೬. ಐಂದ್ರ ೨೭. ವೈಧೃತಿ.

**ಕರಣಗಳು:**— ೧. ಬವ ೨. ಬಾಲವ ೩. ಕೌಲವ ೪. ತೈತಿಲ ೫. ಗರಜ ೬. ವಣಿಜ ೭. ವಿಷ್ಟಿ ೮. ಶಕುನಿ ೯. ಚತುಷ್ಪದ ೧೦. ನಾಗ ೧೧ ಕಿಂಸ್ತುಘ್ನ. ಕರಣ=ಅರ್ಧ ತಿಥಿಯ ವೇಳೆ

**ರಾಶಿಗಳು:**— ೧ ಮೇಷ ೨. ವೃಷಭ ೩. ಮಿಥುನ ೪. ಕರ್ಕ ೫. ಸಿಂಹ ೬. ಕನ್ಯಾ ೭. ತುಲಾ. ೮. ವೃಶ್ಚಿಕ ೯. ಧನು ೧೦. ಮಕರ ೧೧. ಕುಂಭ ೧೨. ಮೀನ.

**ಘಟಿಕಾ ( ಘಳಿಗೆ ) ಮತ್ತು ಘಳ:**-- ೬೦ ಪಳ=೧ಘಳಿಗೆ, ೬೦ಘಳಿಗೆ=೧ದಿವಸ. ಇವುಗಳ ಸಹಾಯದಿಂದ ೧ ಪಳ ಮತ್ತು ೧ ಘಳಿಗೆ ಇವುಗಳ ಬೆಲೆಯನ್ನು ತಾಸು. ಮಿನಿಟುಗಳಲ್ಲಿ ತೆಗೆಯಬಹುದು ೧ ದಿನದಲ್ಲಿ ೨೪ ತಾಸುಗಳು ಅಥವಾ ೬೦ ಗಳಿಗೆಗಳು ಇರುತ್ತವೆ. ಆದ್ದರಿಂದ ೧ತಾಸು=(೬೦/೨೪)=೨½ ಘಳಿಗೆಗಳು ಮಿನಿಟು ತಾಸಿನ ೬೦ ನೆಯ ಭಾಗವು. ಪಳವು ಘಳಿಗೆಯ ೬೦ನೆಯ ಭಾಗವು. ಆದ್ದರಿಂದ ೧ ಮಿನಿಟು=೨½ ಪಳಗಳು. ಪಂಚಾಂಗವನ್ನು ನೋಡಿ ತಿಳಿಯುವದಕ್ಕಾಗಿ ೧೯೫೬ನೇ ಇಸ್ವಿ (ನಂದನವನ ಸಂವತ್ಸರ)ಯ ಪಂಚಾಂಗದಲ್ಲಿಯ ಶ್ರಾವಣಮಾಸದ ಎರಡು ತಿಥಿಗಳ ಮಾಹಿತಿಯನ್ನು ಶೋಧಿಸುವ ಮಾದರಿಯನ್ನು ಕೆಳಗೆ ಕೊಟ್ಟಿದೆ. ಅಲ್ಲದೆ ಅದರ ವಿವರವನ್ನು ಹೇಳಿದೆ.

| ಇಂಗ್ಲಿಷ ತಾ. | ಮುಸ ತಾ. | ಮಳೆಯ ನಕ್ಷತ್ರ | ಗ್ರಹ ಚಾರ | ವಾರ. | ಶ್ರೀ ಶಾ. ಶಕೆ ಮದನನಾಮ ಸಂವತ್ಸರ ಶ್ರಾವಣಶುಕ್ಲ ಪಕ್ಷದ ಇಸ್ವಿ ೧೯೫೬ ಜುಲೈ ದಕ್ಷಿಣಾಯನ ವಸಂತ ಋತು. |
|---|---|---|---|---|---|
| ಜುಲೈ ೨೨ | ಸವ್ವಾಲ ೨೫ | ಪುಷ್ಯ | ಶುಬುಮ | ಮಂ. | ಪ್ರ ೬೦-೦ ಪುಷ್ಯ ೫೧-೪೫ ವಜ್ರ ೩೭-೧೮ ಕಿಂಸ್ತು ೨೯-೧೪ ಮಂಗ |
| ೨೮ | ಜಿಲ್ಕಾದ ೫ | ,, ೩ | ಬು | ಸೋ. | ಷ ೨೦-೧೭ ಹಸ್ತ ೧೮-೧೦ ಸಿದ್ಧ ೪೦-೨೩ ತೈತಿಲ ೨೦-೧೭ ಕರಿಕಟ್ಟುಂಬ್ಲಿ |

ಇದರಲ್ಲಿ ಮೊದಲಿನ ೫ ಮನೆಗಳ ಮಾಹಿತಿ ನಿಮಗೆ ಸಹಜ ತಿಳಿಯುವದು. ಆದರೆ ೩ನೆಯ ಮನೆಯು ಆಗುವ ಮಳೆಯ ನಕ್ಷತ್ರವನ್ನು ಹೇಳುತ್ತದೆ. ೪ನೆಯ ಮನೆಯ ವಿಚಾರ ಜ್ಯೋತಿಷಶಾಸ್ತ್ರಕ್ಕೆ ಸಂಬಂಧಿಸಿದ್ದು. ಇನ್ನು ೬ನೆಯ ಮನೆಯಲ್ಲಿ ಪ್ರ=ಪ್ರತಿಪದೆ ಈ ತಿಥಿಯು ಮಂಗಳವಾರ ಸೂರ್ಯೋದಯದಿಂದ ೬೦ ಗಳಿಗೆ ಇದೆ. ಪುಷ್ಯ ನಕ್ಷತ್ರವು ೫೧ ಗಳಿಗೆ ೪೫ ಪಳವೂ, ವಜ್ರಯೋಗವು ೩೭ ಗಳಿಗೆ ೧೮ ಪಳವೂ ಕಿಂಸ್ತುಘ್ನ ಕರಣ ೨೯ ಗಳಿಗೆ ೧೪ ಪಳವೂ ಇರುವವೆಂದು ತಿಳಿಯಬೇಕು. ಅದರಂತೆ ಜುಲೈ ೨೮ ತಾರೀಖಿನ ಸೋಮವಾರ ಷಷ್ಠಿ ತಿಥಿ ೨೦ ಗಳಿಗೆ ೧೭ ಪಳ ಇದೆ. ಆದಿನ ಹಸ್ತನಕ್ಷತ್ರ ೧೮ ಗಳಿಗೆ ೧೦ ಪಳ ಸಿದ್ಧಯೋಗ ೪೦ ಗಳಿಗೆ ೨೩ ಪಳ ತೈತಿಲ ಕರಣ ೨೦ ಗಳಿಗೆ ೧೭ ಪಳ ಇರುತ್ತದೆ. ಇದು ಶ್ರಾವಣಮಾಸ ಶುಕ್ಲ ಪಕ್ಷದ ಸೋಮವಾರ ಇದ್ದು ಈ ದಿನ ಕರಿಕಟ್ಟುಂಬ್ಲಿ ಇದೆ.

ಹೀಗೆಯೇ ನೀವು ಪಂಚಾಂಗದ ಪ್ರತಿದಿನದ ವಾರ, ನಕ್ಷತ್ರ, ತಿಥಿ ಇತ್ಯಾದಿಗಳನ್ನು ನೋಡಿ ತಿಳಿದುಕೊಳ್ಳಬೇಕು.

(ಬ) **ರೇಲ್ವೆ ಗಾಯಿಡ:** — ರೇಲ್ವೆಯಲ್ಲಿ ಪ್ರವಾಸ ಮಾಡುವವರಿಗೆ ಗಾಡಿಗಳು ನಿಲ್ದಾಣಕ್ಕೆ ಬರುವ ವೇಳೆ, ಹೊರಡುವ ವೇಳೆ, ತಿಕೀಟಿನದರ ಮುಂತಾದವುಗಳ ಬಗ್ಗೆ ಸಂಪೂರ್ಣ ಜ್ಞಾನವಿರಬೇಕು. ಇಲ್ಲದಿದ್ದರೆ ಬಹಳ ತೊಂದರೆಯಾಗುತ್ತದೆ. ಈ ಎಲ್ಲ ವಿಷಯಗಳನ್ನು ರೇಲ್ವೆ (ಗಾಯಿಡ್) ಕೈಪಿಡಿಯಲ್ಲಿ ಕೊಟ್ಟಿರುವರು. ಈ ಪುಸ್ತಕಗಳು ರೇಲ್ವೆಸ್ಟೇಶನ್ನುಗಳಲ್ಲಿ ದೊರೆಯುವವು. ಇನ್ನು ಇಂಥ ರೇಲ್ವೆ ಕೈಪಿಡಿಗಳನ್ನು ನೋಡಿ ಹೇಗೆ ಅರ್ಥ ಮಾಡಿಕೊಳ್ಳಬೇಕೆಂಬುದನ್ನು ತಿಳಿದುಕೊಳ್ಳೋಣ.

(ರೇಲ್ವೆಗಾಯಿಡ ತೆರೆದು ನೋಡಿರಿ) ಎಲ್ಲಕ್ಕೂ ಮೇಲೆ ಆ ಗಾಡಿಯು ಯಾವ ಊರಿನಿಂದ ಯಾವ ಊರ ವರೆಗೆ ಹೋಗುವದೆಂಬವನ್ನು ಕೊಟ್ಟಿರು

ವು. ಅದರ ಕೆಳಗೆ ಖಾನೆಗಳಿರುವವು. ಅವುಗಳಲ್ಲಿ ಮೊದಲಿನ ಖಾನೆಯಲ್ಲಿ ಕೆಲವು ಅಂಕಿಗಳಿರುವವು. ಅವುಗಳ ಮುಂದೆ ರೇಲ್ವೆ ನಿಲ್ದಾಣಗಳ ಹೆಸರುಗಳಿರುವವು. ಆ ಅಂಕಿಗಳು ಅವುಗಳ ಮುಂದೆ ಕೊಟ್ಟಿರುವ ರೇಲ್ವೆ ನಿಲ್ದಾಣಗಳು ಪ್ರಾರಂಭದ ನಿಲ್ದಾಣದಿಂದ ಎಷ್ಟು ಮೈಲು ಅಂತರದಲ್ಲಿರುವವೆಂಬವನ್ನು ತೋರಿಸುವವು. ಕೆಲವು ರೇಲ್ವೆ ನಿಲ್ದಾಣಗಳ ಮುಂದೆ R, N. V. V. ಎಂಬ ಅಕ್ಷರಗಳಿರುವವು. R ಎಂಬ ಅಕ್ಷರವು ಆ ನಿಲ್ದಾಣದಲ್ಲಿ ಚಹ ಹಾಗೂ ಫಲಾಹಾರ ದೊರೆಯುವದೆಂದೂ, N. V. ಎಂಬುದು ಆ ನಿಲ್ದಾಣದಲ್ಲಿ ಮಾಂಸಾಹಾರಿ ಊಟ ದೊರೆಯುವದೆಂದೂ. V. ಎಂಬುದು ಆ ನಿಲ್ದಾಣದಲ್ಲಿ ಶಾಕಾಹಾರಿ ಊಟ ದೊರೆಯುವದೆಂದೂ, ತೋರಿಸುವವು. ಇವುಗಳ ಮುಂದಿನ ಖಾನೆಯಲ್ಲಿ ಗಾಡಿಗಳು ಆಯಾ ನಿಲ್ದಾಣಗಳಿಗೆ ಬಂದು ಮುಟ್ಟುವ ವೇಳೆ ಇರುವದು. ಕೆಲವು ನಿಲ್ದಾಣಗಳ ಮುಂದೆ ಎರಡು ವೇಳೆಗಳಿರುವವು. ಸೇ. ಎಂಬ ಅಕ್ಷರದ ಮುಂದೆ ಇದ್ದ ವೇಳೆಯು ಗಾಡಿಯು ಆ ನಿಲ್ದಾಣಕ್ಕೆ ಬಂದು ಸೇರುವ ವೇಳೆಯನ್ನೂ **ಹೋ.** ಎಂಬ ಅಕ್ಷರದ ಮುಂದೆ ಇದ್ದ ವೇಳೆಯು ಗಾಡಿಯು ಆ ನಿಲ್ದಾಣದಿಂದ ಹೊರಡುವ ವೇಳೆಯನ್ನೂ ತೋರಿಸುವವು ಕೆಲವು ಸಲ ರೇಲ್ವೆ ಕೈಪಿಡಿಗಳಲ್ಲಿ ಒಂದೇ ಪುಟದಲ್ಲಿ ಒಂದೇ ನಿಲ್ದಾಣದಿಂದ ಮೇಲ್ಗಡೆಗೆ ಹೋಗುವ ಗಾಡಿಗಳ ವೇಳೆಯನ್ನೂ, ಕೆಳಗಡೆಗೆ ಹೋಗುವ ಗಾಡಿಗಳ ವೇಳೆಯನ್ನೂ, ಕೊಟ್ಟಿರುವರು. ↑ ಎಂಬ ಗುರುತು ಆ ಗಾಡಿಯು ಮೇಲ್ಗಡೆಗೆ ಹೋಗುವದೆಂದೂ ↓ ಎಂಬ ಗುರುತು ಆ ಗಾಡಿಯು ಕೆಳಗಡೆಗೆ ಹೋಗುವದೆಂದೂ ಸೂಚಿಸುವವು. ಇದಲ್ಲದೆ* ರೇಲ್ವೆ ಕೈಪಿಡಿಯಲ್ಲಿ ರೇಲ್ವೆಗೆ ಸಂಬಂಧಿಸಿದ ನಿಯಮಗಳನ್ನೂ, ಪಾರ್ಸಲ್, ರೇಲ್ವೆ ತಿಕೀಟಿನವರ ಮುಂತಾದ ವಿಷಯಗಳ ಬಗ್ಗೆಯೂ ಕೊಟ್ಟಿರುವರು ಮೇಲೆ ಹೇಳಿದ ಸಂಗತಿಗಳಿಂದ ಈಗ ನಿಮಗೆ ರೇಲ್ವೆ ಕೈಪಿಡಿಯನ್ನು ಹೇಗೆ ಓದಿ ಅರ್ಥ ಮಾಡಿಕೊಳ್ಳಬೇಕೆಂಬುದು ಗೊತ್ತಾಯಿತಷ್ಟೇ.

*ರೇಲ್ವೆಯ ವೇಳಾಪತ್ರಿಕೆಯು ಎಪ್ರೀಲ ೧ನೆಯ ತಾರೀಖು ಹಾಗು ಅಕ್ಟೋಬರ ೧ನೆಯ ತಾರೀಖು ಹೀಗೆ ವರ್ಷದಲ್ಲಿ ಎರಡು ಸಲ ಬದಲಾಗುವದು. ಆದ್ದರಿಂದ ಆ ಕಾಲಕ್ಕೆ ಹೊಸ ರೇಲ್ವೆ ಕೈಪಿಡಿಗಳೂ ಸಿದ್ಧವಾಗುವವು.

(ಕ) **ಪೋಸ್ಟಲ್ ಗಾಯಿಡ** ( ಅಂಚೆಯ ಕೈಪಿಡಿ ):—

ರೇಲ್ವೇ ಕೈಪಿಡಿಯಲ್ಲಿ ರೇಲ್ವೆಗೆ ಸಂಬಂಧಿಸಿದ ನಿಯಮಗಳನ್ನು ಕೊಟ್ಟಂತೆ ಅಂಚೆಯ ಕೈಪಿಡಿಯಲ್ಲಿ ಅಂಚೆಯ ವ್ಯವಹಾರ ಬಗ್ಗೆ ಸವಿಸ್ತಾರವಾಗಿ ವಿಷಯಗಳನ್ನು ಕೊಟ್ಟಿರುವರು. ನೀವು ಈಗಾಗಲೇ ಕಾರ್ಡು, ಪಾಕೀಟುಗಳ ಬೆಲೆ, ತಂತೀ ಟಪಾಲು, ಅಂಚೆಯಿಂದ ಹಣ ಕಳಿಸುವದು, ವೈಮಾನಿಕ ಟಪಾಲು, ಹಾಗೂ ಅಂಚೆಯಿಂದ ರಜಿಸ್ಟರ, ಪಾರ್ಸಲ, ವ್ಹಿ.ಪಿ. ಮುಂತಾದ ಬೇರೆ ಬೇರೆ ರೀತಿಗಳಿಂದ ವಸ್ತುಗಳನ್ನು ಒಂದು ಊರಿನಿಂದ ಇನ್ನೊಂದು ಊರಿಗೆ ಕಳಿಸುವದರ ವಿಷಯವಾಗಿ ಕಲಿತಿರುವಿರಿ. ಇದೇ ವಿಷಯಗಳನ್ನು ಈ ಅಂಚೆಯ ಕೈಪಿಡಿ ಎಂಬ ಪುಸ್ತಕದಲ್ಲಿ ಕೊಟ್ಟಿರುವರು. ಇವರಲ್ಲಿ ಬೇರೆ ಬೇರೆ ವಿಷಯಗಳನ್ನು ಬೇರೆ ಬೇರೆ ತಲೆ ಬರಹಗಳ ಕೆಳ ಸ್ಪಷ್ಟವಾಗಿ ಬರೆದಿರುವದರಿಂದ ನಿಮಗೆ ಅದು ಸುಲಭವಾಗಿ ತಿಳಿದುಕೊಳ್ಳಲಿಕ್ಕೆ ಬರುವದು.

## ಅಭ್ಯಸನಗಳು

೧. ಪಂಚಾಂಗವೆಂದು ಹೆಸರು ಬರಲು ಕಾರಣವೇನು ?

೨. ಪಂಚಾಗ ಉಪಯೋಗವು ಎಲ್ಲೆಲ್ಲಿ ಆಗುತ್ತದೆ.

೩. ತಿಥಿಗಳು ಎಷ್ಟು ? ೧೫ನೆಯ ೩೦ನೆಯ ತಿಥಿಗಳಾವವು ?

೪. ತಿಥಿಮತ್ತು ನಕ್ಷತ್ರಗಳ ಮುಂದಿರುವ ಅಂಕೆಗಳು ಏನನ್ನು ಹೇಳುವವು. ಅವುಗಳ ಪ್ರಾರಂಭವು ಯಾವ ವೇಳೆಯಿಂದ ಆಗುವದು.

# ದಿ ಅಶೋಕ ಪಬ್ಲಿಶಿಂಗ ಕಂಪನಿ, ಧಾರವಾಡ.

## ಪ್ರಸಿದ್ಧವಾದ ಪುಸ್ತಕಗಳು



೧. ಸಚಿತ್ರ ನೂತನ ಗಣಿತ ೨ನೆಯ ಇಯತ್ತೆಗೆ ೦– ೮–೦

೨. ,, ,, ೩ನೆಯ ,, ೦–೧೦–೬

೩. ಸಚಿತ್ರ ಪೌರನೀತಿ ೨ನೆಯ ,, ೦– ೬–೦

೪ ,, ,, ೩ನೆಯ ,, ೦– ೭–೦

೫. ,, ,, ೪ನೆಯ ,, ೦– ೭–೦

೬. ಸಚಿತ್ರ ಅಂಕಲಿಪಿ (೩ ಬಣ್ಣಗಳ ಮುಖಪುಟ) ೦– ೫–೦

೭. ಸಚಿತ್ರ ಸಾಮಾನ್ಯಜ್ಞಾನ ೩ನೆಯ ಇಯತ್ತೆಗೆ ೦–೧೨–೦
(ಮೈಸೂರ ರಾಜ್ಯದ ಹೊಸ ಅಭ್ಯಾಸಪತ್ರಿಕೆಗನುಸಾರವಾಗಿ ತಯಾರಿಸಿದೆ.)

೮. ಸಚಿತ್ರ ಸಾಮಾನ್ಯಜ್ಞಾನ ೪ನೆಯ ಇಯತ್ತೆಗೆ ೦–೧೨–೦

೯. ಸಚಿತ್ರ ಕಥಾರೂಪ ಇತಿಹಾಸ
(೩ ಬಣ್ಣಗಳ ಮುಖಪುಟ) ೩ನೆಯ ಇಯತ್ತೆಗೆ ೦–೧೦–೮
(ಮೈಸೂರ ರಾಜ್ಯದ ಹೊಸ ಅಭ್ಯಾಸಪತ್ರಿಕೆಗನುಸಾರವಾಗಿ ತಯಾರಿಸಿದೆ.)